ಸಂಸ್ಮರಣ ಸಂಚಿಕೆ

# ಡಾ. ಬೆಟಗೇರಿ ಕೃಷ್ಣಶರ್ಮಾ

## ಸತ್ಕಾರ ಸಮಾರಂಭ

೨೧-೨-೧೯೮೨



ಡಾ. ಬೆಟಗೇರಿ ಕೃಷ್ಣಶರ್ಮಾ ಸಂಭಾವನಾ ಗ್ರಂಥ

# ಕವಿಭೂಷಣ







ಸಂಪಾದಕರು

**ಜ್ಯೋತಿ ಹೊಸೂರ**

**ಡಾ। ಬಸವರಾಜ ಮಲಶೆಟ್ಟಿ**

**ನಿಂಗಣ್ಣ ಸಣ್ಣಕ್ಕಿ**



ಡಾ. ಬೆಟಗೇರಿ ಕೃಷ್ಣಶರ್ಮಾ ಸನ್ಮಾನ ಸಮಿತಿ ಪರವಾಗಿ

**ಕಾಲಗತಿ ಪ್ರಕಾಶನ, ರಾಯಬಾಗ**

ಜಿಲ್ಲೆ – ಬೆಳಗಾವಿ.

**KAVIBHOOSHANA :**

Dr. Betageri Krishnasharma Satkar Samarambha Samsmaran Sanchike.

Editors :

**Jyoti Hosur.**
Arts & Commerce college, Raibag (Dt. Belgaum)

**Dr. Basakaraj Malashetti**
Vijayanagar College. Hospet.

**Ninganna Sannakki**
New English, Gokak (Dt. Belgaum)

Published by

Kalagati Prakashan, Raibag-591317 (Dt. Belgaum)
On behalf of Felicitation Committee,

Price Rs. 8/-
February 1982



Cover Design :
K. B. Kulkarni

Blocks :
Sharada Process Studio, Belgaum Road, Dharwad

Printers :

C. T. Tadakod.
Shri Sharada Press
Tadakod Galli, Dharwad.
21 - 2 - 1982

# ಸಂಪಾದಕೀಯ

ಡಾ. ಬೆಟಗೇರಿ ಕೃಷ್ಣಶರ್ಮ ಅವರು ಹಿರಿಯ ತಲೆಮಾರಿನ ಬಹುಮುಖ ಪ್ರತಿಭೆಯ ಅಗ್ರಗಣ್ಯ ಸಾಹಿತಿಗಳು; ವಿದ್ವಾಂಸರು; ಪತ್ರಿಕಾಕರ್ತರು. ಕನ್ನಡದ ನವೋದಯ ಕಾಲದಲ್ಲಿ ಕನ್ನಡನಾಡು-ನುಡಿಗಳ ಏಳಿಗೆಗಾಗಿ ದುಡಿದವರು. ನಡೆ-ನುಡಿಯಲ್ಲಿ ಪರಿಶುದ್ಧರಾದ ಸಜ್ಜನರು. ಪ್ರಸಿದ್ಧಿಯ ಹಂಬಲ ಇಲ್ಲದವರು. ಹೀಗಾಗಿ, ಸದ್ದುಗದ್ದಲ ಮಾಡಿದವರತ್ತ ಗಮನಹರಿಸುವ ಇಂದಿನವರ ರೀತಿಯಿಂದಾಗಿ ಯೋಗ್ಯತೆಗೆ ತಕ್ಕ ಮನ್ನಣೆ ಕನ್ನಡಿಗರಿಂದ ಇವರಿಗೆ ಸಿಕ್ಕಿಲ್ಲವೆಂಬುದು ಸ್ಪಷ್ಟ.

ಅಗ್ರಗಣ್ಯ ಸಾಹಿತಿಯೊಬ್ಬನಿಗೆ ವ್ಯಕ್ತಿತ್ವ ಮತ್ತು ಕೃತಿದರ್ಶನ ಮಾಡಿಕೊಡಬಲ್ಲ ಒಂದು ಅಭಿನಂದನ ಗ್ರಂಥ ಸಮರ್ಪಿಸಿ, ಗೌರವಿಸುವುದು ನಾಡವರ ಕರ್ತವ್ಯ. ಡಾ. ಬೆಟಗೇರಿ ಕೃಷ್ಣಶರ್ಮ ಅವರಿಂದ ಮಾರ್ಗದರ್ಶನ ಪಡೆದು, ಸಹಾಯ ಪಡೆದು, ಅವಕಾಶ ಪಡೆದು, ಇಂದು ಅಗ್ರಗಣ್ಯ ಸಾಹಿತಿಗಳಾಗಿರುವವರು ಕರ್ನಾಟಕದ ಎಲ್ಲೆಡೆ ಅನೇಕರಿದ್ದಾರೆ. ಗಳಿಸಿದ ಪ್ರಕಾಶಕರೂ ಇದ್ದಾರೆ. ಇಂಥವರು ಮುಂದಾಗಿ ಈ ಕಾರ್ಯ ಹತ್ತಿಪ್ಪತ್ತು ವರ್ಷಗಳ ಹಿಂದೆಯೇ ಮಾಡಬೇಕಾಗಿತ್ತು. ಡಾ. ಬೆಟಗೇರಿಯವರಿಗೆ ಎಂಬತ್ತು ತುಂಬುತ್ತ ಬಂದರೂ ಆರೋಗ್ಯ ವಿಷಮಗೊಳ್ಳುತ್ತ ಬಂದರೂ ಅಗ್ರಗಣ್ಯರೆನಿಸಿಕೊಳ್ಳುವವರು ಮಿಸುಕಾಡದಿದ್ದುದನ್ನು ಅರಿತ ನಾವು ಮೂವರು ಗೆಳೆಯರು ಆತಂಕಗೊಂಡೆವು. ೧೯೭೮ ರ ಡಿಸೆಂಬರ ತಿಂಗಳಲ್ಲಿ ಜಾನಪದ ಸಮ್ಮೇಳನವೊಂದರಲ್ಲಿ ಭಾಗವಹಿಸಲು ಇಳಕಲ್ಲದಲ್ಲಿ ಮೂವರೂ ಒಂದೆಡೆ ಸೇರಿದಾಗ, ಡಾ. ಬೆಟಗೇರಿಯವರಿಗೆ ಅಭಿನಂದನ ಗ್ರಂಥವನ್ನು ಅರ್ಪಿಸಿಯೇ ತೀರುವುದೆಂದು ನಿರ್ಧರಿಸಿದೆವು. ಮೂರು ಕೋಟಿ ಕನ್ನಡಿಗರ ಪ್ರತಿನಿಧಿಗಳಾಗಿ ಮುಂದಾಗೋಣ-ಅಂದುಕೊಂಡವು.

೧೯೭೯ ರ ಫೆಬ್ರುವರಿ ತಿಂಗಳಲ್ಲಿ ಕಾರ್ಯಾರಂಭ ಮಾಡಿದೆವು. ಕೆಲಸ ಮುನ್ನಡೆದಂತೆ ಹಲವು ಬಗೆಯ ಅನುಭವಗಳು ಬಂದವು. ಮಿತ್ರರ, ಹಿರಿಯರ, ಗಣ್ಯರ ನುಡಿಗೂ ನಡೆಗೂ ಎಷ್ಟು ಭಯಂಕರ ಅಂತರವಿರುವುದೆಂಬುದು ಗೊತ್ತಾಯಿತು. ಎಷ್ಟು ತಪ್ಪುಗ್ರಹಿಕೆಗಳುಂಟಾಗುತ್ತವೆಂಬುದನ್ನು ಅರಿತುಕೊಂಡೆವು. ಅನಿರೀಕ್ಷಿತ ರೀತಿಯ ಸಹಾಯ, ಬೆಂಬಲ ಸಿಗಬಲ್ಲುದೆಂಬುದನ್ನೂ ಕಂಡುಕೊಂಡೆವು.

ಅಭಿನಂದನ ಗ್ರಂಥಕ್ಕೆ ಸಾಕಾಗುವಷ್ಟು ಉತ್ತಮ ಲೇಖನಗಳು ಸಕಾಲದಲ್ಲಿ ಕೂಡಿದವು. 'ಬೆಳುವಲ' ಎಂದು ಅರ್ಥಪೂರ್ಣವಾದ ಹೆಸರನ್ನು ಅಭಿನಂದನಗ್ರಂಥಕ್ಕೆ ಇಟ್ಟು, ಮುದ್ರಣಕ್ಕೆ ಅಣಿಗೊಳಿಸಿದೆವು. ಪ್ರಕಟನೆಯ ಕಾರ್ಯದಲ್ಲಿ ಅಡೆತಡೆಗಳು ಬಂದವು. ಭರವಸೆಕೊಟ್ಟು ಬೆನ್ನು ಚಪ್ಪರಿಸಿದವರು ಹಿಂದೆ ಸರಿದರು. ಮುಂದಾದವರಿಗೆ ಅನಿವಾರ್ಯ. ಏನೇ ಬಂದರೂ 'ಬೆಳುವಲ' ಪ್ರಕಟಿಸಿ ಡಾ. ಬೆಟಗೇರಿ ಅವರನ್ನು ಸತ್ಕರಿಸಿ, ಅಭಿನಂದನ ಗ್ರಂಥ ಸಮರ್ಪಿಸಬೇಕೆಂದು ಹಟಕ್ಕೆ ಬಿದ್ದೆವು.

ಮೂರು ವರ್ಷಗಳ ಸತತ ಹೋರಾಟದಿಂದ ಗ್ರಂಥ ಮುದ್ರಣ ಮುಗಿಯುತ್ತ ಬಂದಿತು. ಗ್ರಂಥದ ಗಾತ್ರವೂ ದೊಡ್ಡದಾಯಿತು. ಸಾಮಾನ್ಯ ಓದುಗರಿಗೆ ಡಾ. ಬೆಟಗೇರಿ ಕೃಷ್ಣಶರ್ಮರ ವ್ಯಕ್ತಿತ್ವ ಮತ್ತು ಸಾಹಿತ್ಯ ಕೃತಿಗಳ ಪರಿಚಯ ಮಾಡಿಕೊಳ್ಳಲು ಅನುಕೂಲವಾಗುವಂತೆ **ಸತ್ಕಾರ ಸಮಾರಂಭದ ನೆನಪಿಗಾಗಿ ಸಂಸ್ಮರಣ ಸಂಚಿಕೆಯೊಂದನ್ನು** ಪ್ರಕಟಿಸುವುದು ಒಳ್ಳೆಯದೆಂಬ ಸೂಚನೆ ಬಂದಿತು. ಈ ಕಾರ್ಯಕ್ಕೆ ವಿವಿಧ ರೀತಿಯಿಂದ ನೆರವಾಗುವುದಾಗಿ ಕೆಲವರು ಭರವಸೆ ಕೊಟ್ಟರು. ಹೀಗಾಗಿ, **'ಕವಿಭೂಷಣ'** ಹೆಸರಿನಿಂದ **ಸಂಸ್ಮರಣ ಸಂಚಿಕೆ** ಪ್ರಕಟಗೊಳಿಸಲು ಸಾಧ್ಯವಾಯಿತು.

'ಕವಿಭೂಷಣ'ಕ್ಕೆ ವ್ಯಕ್ತಿಗಳು, ಸಂಘ—ಸಂಸ್ಥೆಗಳು ಜಾಹೀರಾತು ಕೊಟ್ಟು ನಮಗೆ ಬೆಂಬಲವಿತ್ತಿದ್ದಾರೆ. ಡಾ. ಬೆಟಗೇರಿ ಕೃಷ್ಣಶರ್ಮಾ ಅವರ ಹುಟ್ಟು ಜಿಲ್ಲೆ ಬೆಳಗಾವಿ. ನಮ್ಮವರೆಂಬ ಅಭಿಮಾನದಿಂದ ಜಿಲ್ಲೆಯಲ್ಲಿಯ ಸಂಘ—ಸಂಸ್ಥೆಗಳ ಸಂಚಾಲಕ ಮಂಡಲದವರು ಜಾಹೀರಾತು ಕೊಡುವ ಮೂಲಕ ನಮಗೆ ನೆರವಾಗಿದ್ದಾರೆ. ರಾಯಬಾಗ, ಗೋಕಾಕ ಮತ್ತು ಹುಕ್ಕೇರಿ ತಾಲೂಕುಗಳಿಂದ ಹೆಚ್ಚಿನ ಪ್ರಮಾಣದ ಜಾಹೀರಾತುಗಳು ಸಿಕ್ಕಿವೆ. ಬೆಳಗಾವಿ, ಉಗಾರ ಮತ್ತು ಸಂಡೂರ ಪಟ್ಟಣಗಳನ್ನು ನಾವು ಮರೆಯುವಂತಿಲ್ಲ.

ಜಾಹೀರಾತು ಸಂಗ್ರಹಕಾರ್ಯದಲ್ಲಿ ಕೆಲವರು ಬಹಳಷ್ಟು ಸಹಾಯಕರಾಗಿದ್ದಾರೆ. ಹುಕ್ಕೇರಿಯ ಶ್ರೀ ಪ್ರಕಾಶ ದೇಶಪಾಂಡೆ ಅವರನ್ನು ಈ ಸಮಯದಲ್ಲಿ ನೆನಪಿಸಿಕೊಳ್ಳಬೇಕು. ಬೆಲ್ಲದಬಾಗೇವಾಡಿಯ ಶ್ರೀ ವೆಂಕಟೇಶ ವಿಠ್ಠಲರಾವ ದೇಶಪಾಂಡೆ (ಶ್ರೀ ಗೋವಿಂದ ದೇಸಾಯಿ) ಮೂವರೊಂದಿಗೆ ನಾಲ್ಕನೆಯವರಾಗಿ ನಮ್ಮೊಂದಿಗೆ ಶ್ರಮಿಸಿದ್ದಾರೆ. ಇವರಿಗೆ ನಾವು ಋಣಿ.

ಕೆಲವು ಹಿರಿಯರು, ಹಲವು ಅಭಿಮಾನಿಗಳು ಆಗಾಗ ಮಾರ್ಗದರ್ಶನ ಮಾಡಿದ್ದಾರೆ; ವಿವಿಧ ರೀತಿಯಿಂದ ನೆರವಾಗಿದ್ದಾರೆ. ಶ್ರೀ ಅರವಿಂದ ಆರ್ಯ ಅವರು ಕರಡಚ್ಚು ತಿದ್ದಿದ್ದಾರೆ. ಲೇಖಕರು ಲೇಖನಗಳನ್ನಿತ್ತು ನೆರವಾಗಿದ್ದಾರೆ. ಡಾ. ಬೆಟಗೇರಿ ಅವರ ಪುತ್ರ ಶ್ರೀ ಸುರೇಶ ಬೆಟಗೇರಿ ಅವರು ಕೆಲವು ಫೋಟೋ ಕೊಟ್ಟು ಸಹಕರಿಸಿದ್ದಾರೆ. ಶ್ರೀ ಎಸ್. ಎಂ. ಮಲಕಾಯಿ ಅವರು ಪಡಿಯಚ್ಚುಗಳನ್ನು ಸಿದ್ಧಗೊಳಿಸಿ ಕೊಟ್ಟಿದ್ದಾರೆ. ಶ್ರೀ ಕೆ. ಬಿ. ಕುಲಕರ್ಣಿ ಮುಖಪುಟದ ವಿನ್ಯಾಸಕ್ಕೆ ಕಾರಣರಾಗಿದ್ದಾರೆ. ಶ್ರೀ ಶಾರದಾ ಮುದ್ರಣಾಲಯದ ಒಡೆಯರು ಮತ್ತು ಸಿಬ್ಬಂದಿ ವರ್ಗದವರು ಅಂದವಾಗಿ ಮುದ್ರಿಸಿಕೊಟ್ಟಿದ್ದಾರೆ. ಎಲ್ಲರಿಗೂ ನಾವು ಕೃತಜ್ಞರು.

**ಜ್ಯೋತಿ ಹೊಸೂರ**
**ಡಾ. ಬಸವರಾಜ ಮಲಶೆಟ್ಟಿ**
**ನಿಂಗಣ್ಣ ಸಣ್ಣಕ್ಕಿ**

# ಪರಿವಿಡಿ



ಕುಳಿತವರು:–ಬಲದಿಂದ ಎಡಕ್ಕೆ (೧) ಡಾ. ಬೆಟಗೇರಿ ಕೃಷ್ಣಶರ್ಮ (೨) ಶ್ರೀ ಕಲಮುದಾನಿ (೩) ನಾರಾಯಣ ಸಂಗಮ
(೪) ವಿನೀತ ರಾಮಚಂದ್ರರಾಯರು (೫) ಗೋ. ವೆಂ. ಚುಳಕಿ



೮೦ನೇ ಹುಟ್ಟುಹಬ್ಬದ ಸಂದರ್ಭದಲ್ಲಿ ಕುಟುಂಬದ ಸದಸ್ಯರು ಮತ್ತು ಸಂಬಂಧಿಗಳೊಂದಿಗೆ.



೧೯೭೧ ರಲ್ಲಿ ರಾಜ್ಯಸಾಹಿತ್ಯ ಅಕಾಡಮಿಯ ಪ್ರಶಸ್ತಿ ಸಂದರ್ಭದಲ್ಲಿ ಇತರ ಪ್ರಶಸ್ತಿ ವಿಜೇತರೊಂದಿಗೆ

(ಎಡದಿಂದ ಬಲಕ್ಕೆ) (೧) ಶ್ರೀ ಎನ್. ಕೆ. ದೀಕ್ಷಿತ (೨) ಶ್ರೀ ಎಸ್. ವಿ. ಪರಮೇಶ್ವರಭಟ್ಟ (೩) ಡಾ. ಬೆಟಗೇರಿ ಕೃಷ್ಣಶರ್ಮ (೪) ಶ್ರೀರಂಗ (೫) ಧರ್ಮವೀರ (ರಾಜ್ಯಪಾಲರು) (೬) ಡಾ. ಎಸ್. ವಿ. ರಂಗಣ್ಣ (೭) ಡಾ ಆರ್. ಸಿ. ಹಿರೇಮಠ



೧೯೭೪ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ ಪದವಿ ನೀಡಿದ
ಸಂದರ್ಭ, (ಡಾ. ಬೆಟಗೇರಿ ಕೃಷ್ಣಶರ್ಮ. ಡಾ. ಮಲ್ಲಿಕಾರ್ಜುನ ಮನ್ಸೂರ, ಡಾ. ವಾಯ್. ನಾಗೇಶ ಶಾಸ್ತ್ರಿ).



ಸ್ನೇಹಿತರೊಂದಿಗೆ

ಎಡದಿಂದ ಬಲಕ್ಕೆ (೧) ಎಮ್. ಜಿ. ಪಾಟೀಲ (೨) ಶ್ರೀರಂಗ (೩) ಶಂ. ಬಾ. ಜೋಶಿ (೪) ಬೆಟಗೇರಿ ಕೃಷ್ಣಶರ್ಮ

ಹಿಂದಿನವರು (೧) ಶ್ರೀ ಪೋತದಾರ್ (೨) ಬುರ್ಲಿ ಬಿಂದುಮಾಧವ



ಗದುಗಿನ ತೋಂಟದಾರ್ಯ ಮಠದ ಶ್ರೀಸಿದ್ಧಲಿಂಗ ಸ್ವಾಮಿಗಳೊಂದಿಗೆ

# ನಾನು, ಬರಹಗಾರನಾದುದು ಏಕೆ ?

**ಡಾ. ಬೆಟಗೇರಿ ಕೃಷ್ಣಶರ್ಮಾ**

ನನಗೂ ಇದು ಆಶ್ಚರ್ಯದ ವಿಷಯವೇ ಆಗಿದೆ, ನಾನು ಬರಹಗಾರನಾದುದು ಏಕೆ ? ಹೇಗೆ ? ಎಂದು. ಏಕೆಂದರೆ ನಾನು ಹುಟ್ಟಿದುದು ಒಂದು ಕುಗ್ರಾಮದಲ್ಲಿ, ಬೆಳೆದುದು ಅಶಿಕ್ಷಿತ ಜನರ ಸಹವಾಸದಲ್ಲಿ. ಮೊದಲಿನಿಂದಲೂ ನನಗೆ ಒಕ್ಕಲಿಗ, ದನಕರುಗಳೊಡನೆ ಒಡನಾಟ. ಕಲಿತುದೂ ಅಷ್ಟಕಷ್ಟೇ. ಹೈಸ್ಕೂಲು, ಕಾಲೇಜುಗಳ ಮುಖವನ್ನೇ ಕಂಡವನಲ್ಲ. ೧೨ ನೆಯ ವಯಸ್ಸಿನಲ್ಲಿಯೇ ಜಾನಪದ ಸಂಸ್ಕೃತಿ ಸಂಪನ್ನರಾದ ವೃದ್ಧ ತಂದೆಯವರನ್ನು ಕಳೆದುಕೊಂಡೆ. ಹೀಗೆ ಮಾಡೆಂದು ಹೇಳುವವರು ಯಾರೂ ಇರಲಿಲ್ಲ. ಆದರೆ ನಾನು ಸಂಪ್ರದಾಯವಂತರ ಮನೆಯಲ್ಲಿ ಬೆಳೆದುದರಿಂದ ಮೊದಲಿನಿಂದಲೂ ನಾನೊಬ್ಬ ಧ್ರುವ, ಪ್ರಲ್ಹಾದರಂತೆ ಭಕ್ತನಾಗಬೇಕೆಂದು ಮನದಲಿ ಆಸೆ ಮೂಡುತ್ತಿತ್ತು. ಅಲ್ಲದೇ ಸಾಂಪ್ರದಾಯಿಕ ಭಾವದ ಆ ಮನೆತನದಲ್ಲಿ ಭಕ್ತಿಗೆ ಪೋಷಕವಾಗುವಂತಹ ವಾತಾವರಣವೇ ಇದ್ದಿತು. ಮನೆಯಲ್ಲಿ ಪ್ರತಿಯೊಂದು ವಾರಕ್ಕನುಗುಣವಾಗಿ ಗೋಕಾವಿಯ ಅನಂತಾದ್ರೀಶ ಕವಿಯ ವೆಂಕಟೇಶ ಪಾರಿಜಾತ, ಶಿವಪಾರಿಜಾತ, ಪ್ರಲ್ಹಾದಚರಿತ್ರೆ, ಧ್ರುವಚರಿತ್ರೆ ಮೊದಲಾದ ಗೀತ ಕಾವ್ಯಗಳ ಪಾರಾಯಣ ನಡೆಯುತ್ತಿದ್ದಿತು. ಅಲ್ಲದೇ ಹರಿದಾಸರ ಕೀರ್ತನೆಗಳು ಹೆಚ್ಚಾಗಿ ತುಂಬಿಕೊಂಡಿದ್ದವು. ಹಳ್ಳಿಯಲ್ಲಿ ನಡೆಯುವ ಲಾವಣಿ, ಬಯಲಾಟ, ಶ್ರೀಕೃಷ್ಣ ಪಾರಿಜಾತಗಳು ನನಗೆ ಮೆಚ್ಚುಗೆಯ ಸಂಗತಿಗಳಾಗಿದ್ದವು.

ಅಲ್ಲದೇ ನಮ್ಮ ತಾಯಿಯು ಕಲಿತವಳಲ್ಲವಾದರೂ ಒಂದು ಸಂಪ್ರದಾಯದಲ್ಲಿ ಬೆಳೆದವಳಾದುದರಿಂದ ನನಗೆ ಅಕ್ಷರಜ್ಞಾನವಾದೊಡನೆ ನನ್ನಿಂದ ಮಹಾಭಾರತ, ಜೈಮಿನಿಭಾರತ, ರಾಮಾಯಣ, ಭಾಗವತ ಮೊದಲಾದ ಕನ್ನಡ ಪುಸ್ತಕಗಳನ್ನು ತನಗಾಗಿ ಓದಿಸಿ ಕೇಳಿಕೊಳ್ಳುತ್ತಿದ್ದಳು. ಬೇರೆ ಕಥೆ ಕಾದಂಬರಿಗಳನ್ನೂ ಓದಿಸುತ್ತಿದ್ದಳು. ಇದರಿಂದ ಭಕ್ತನಾಗಬೇಕೆಂಬ ನನ್ನ ಭಾವನೆಗೆ ನೀರೆರೆದಂತಾಯಿತು. (ಪುಟಗೊಟ್ಟಂತಾಯಿತು). ಮೊದಮೊದಲು ಹರಿದಾಸರ ಕೀರ್ತನೆಗಳು ನನ್ನ ಮನಸ್ಸನ್ನು ತುಂಬ ಬೆಳೆದುಕೊಂಡವು. ನಾನು ಚಿಕ್ಕವನಿರುವಾಗಲೇ ದೇವರಿಗೆ ಸಂಬಂಧಿಸಿದ ಪದ-ಪದ್ಯಗಳನ್ನು ಹರಿದಾಸರ ಪದ್ಧತಿಯಲ್ಲಿಯೇ ರಚಿಸತೊಡಗಿದೆ. ಅವನ್ನು ಕೇಳಿ ಹಿರಿಯರೆಲ್ಲರೂ ಕೌತುಕದಿಂದ ಆನಂದಪಡುತ್ತಿದ್ದರಲ್ಲದೇ ನನ್ನ ಬೆನ್ನನ್ನು 'ಭಲೇ' ಎಂದು ತಟ್ಟುತ್ತಿದ್ದರು. ಹೊಸದೊಂದು ಧಾಟಿಯನ್ನು ಎಲ್ಲಿಯಾದರೂ ಕೇಳಿದರೆ ಆ ಧಾಟಿಯ ಪದಗಳು ನನಗೂ ಬರಬೇಕೆಂದು ಎನಿಸುತ್ತಿದ್ದಿತು. ಅದಕ್ಕಾಗಿ ಪದ್ಯಗಳನ್ನು ಆ ಧಾಟಿಯಲ್ಲಿಯೇ ರಚಿಸುತ್ತಿದ್ದೆ.

ಹೀಗಾಗಿ ನಾನು ಮೊದಲು ದಾರಿ ಹಿಡಿದ ಸಾಹಿತ್ಯ ರೀತಿ ಎಂದರೆ ಪದ್ಯದ ಕಡೆಗೆ. ಗದ್ಯದಲ್ಲಿ ಬರೆಯಬೇಕೆಂಬ ಬಯಕೆಯೇ ನನ್ನಲ್ಲಿ ಮೂಡುತ್ತಿರಲಿಲ್ಲ. ಸಾಧಾರಣವಾಗಿ ನನ್ನ ಹದಿನೆಂಟು ಹತ್ತೊಂಬತ್ತು ವರ್ಷಗಳನ್ನು ಇದೇ ಬಗೆಯ ರಚನೆಯಲ್ಲಿಯೇ ಕಾಲವನ್ನು ನೂಕಿದೆ. ಒಂದು ತಮಾಷೆಯ ಸಂಗತಿ ಎಂದರೆ ಯಾರಿಗಾದರೂ ಪತ್ರಬರೆಯಬೇಕಾದರೂ ನಾನು ಪದ್ಯದಲ್ಲಿಯೇ ಪತ್ರವನ್ನು ಬರೆಯುತ್ತಿದ್ದೆ. ಇಷ್ಟೊಂದು ಪದ್ಯರಚನೆಯ ಗೀಳು ತಗುಲಿಕೊಂಡಿತು. ೧೯೧೯ರಲ್ಲಿ ನಾನು 'ಕಾವ್ಯಾನಂದ' ಪುಣೇಕರ ನರಸಿಂಹಾಚಾರ್ಯರ ಕರೆಗೆ ಓಗೊಟ್ಟು

ಹೋದಮೇಲೆ ನನಗೆ ಕರ್ನಾಟಕತ್ವದ ಭಾವನೆ ಬಲವಾಗಿ ಹಿಡಿದುಕೊಂಡಿತು. ದಿ. ಶ್ರೀಮಾನ್ ಆಲೂರ ವೆಂಕಟರಾಯರ 'ಕರ್ನಾಟಕ ಗತವೈಭವ' ಎಂಬ ಗ್ರಂಥದ ವಾಚನವೂ ಈ ಭಾವನೆಯನ್ನು ಉತ್ಕಟಗೊಳಿಸಿತು. ಆಗ ನಾನು ಬರೆದ ಮೊದಲ ಪದ್ಯವೆಂದರೆ "ಕರ್ನಾಟಕಾಂಬೆ ನೀ ಧನ್ಯೆ ಧನ್ಯೆ" ಎಂಬುದು. ಈ ಪದವು ಕರ್ನಾಟಕದಲ್ಲಿ ತುಂಬಾ ಪ್ರಚಾರವಾಗಿ ಕರ್ನಾಟಕ ಗೀತೆಯಾಗಿ ಹಾಡಿಸಿಕೊಳ್ಳುತ್ತಿದ್ದಿತು. ಇದಾದಮೇಲೆ ನಾನು ಬರೆದ 'ನನ್ನದು ಈ ಕನ್ನಡನಾಡು' 'ಜಯಭವಾನಿ ಜಯಮೃಡಾನಿ ಜಯವು ಜಯಭುವನೇಶ್ವರಿ' 'ಆ ಮಾಧವನೆಲ್ಲಿರುತಿಹನು' ಮೊದಲಾದ ಪದ್ಯಗಳು ಕನ್ನಡತನವನ್ನೇ ತುಂಬಿಕೊಂಡು ಹೊರಗೆ ಬಂದುವು. ಎನಿತು ಇನಿದು ಈ ಕನ್ನಡನುಡಿಯು' ಎಂಬುದಾಗಿ ಕನ್ನಡದ ಪ್ರೀತಿ ನನ್ನಿಂದ ಹಾಡಲು ಹಚ್ಚಿತು. ಆಗ ಆ ಸಂದರ್ಭದಲ್ಲಿ ಕನ್ನಡದ ಅಭಿಮಾನದಿಂದ ತುಂಬಿ ಸೂಸುವ ಎಷ್ಟೋ ಕವಿತೆಗಳನ್ನು ರಚಿಸಿದೆ. 'ನಾನಿದನೇ ಹಾಡುವೆನು ಹಾಡು' ಎಂಬ ಪದ್ಯವಂತೂ ತುಂಬ ಲೋಕಪ್ರಿಯವಾಗಿ ಜನರೆಲ್ಲರ ಬಾಯಲ್ಲಿ ನಲಿದಾಡತೊಡಗಿತು. ಅದರಂತೆಯೇ "ಎನಿತು ಇನಿದು ಈ ಕನ್ನಡ ನುಡಿಯು" ಎಂಬ ಹಾಡೂ ಲೋಕಪ್ರಿಯವಾಗಿ ಬಹು ಜನರಿಗೆ ಪರಿಚಿತವಾದುದಾಯಿತು. ನಾನು ಕಾವ್ಯಾನಂದರ ಜೊತೆಯಲ್ಲಿ ಇದ್ದಾಗಲೇ ಅವರಿಂದ ದೇಶಭಕ್ತಿಯ ಪರಿಚಯವಾಗಿ ರಾಷ್ಟ್ರೀಯ ಸಭೆಯ ಪರಿಚಯವೂ ರಾಷ್ಟ್ರಭಕ್ತರ ಬಗೆಗೆ ಆದರವೂ ತಲೆದೋರಿ ರಾಷ್ಟ್ರಭಕ್ತಿಯ ಅನೇಕ ಗೀತೆಗಳನ್ನು ಅದು ಹೊರಹೊಮ್ಮಿಸಿತು. ಅದುವರಗೆ ನನಗೆ ಸಾಮಾಜಿಕ ಭಾವನೆಯೇ ಇರಲಿಲ್ಲ. ದೇವ ಭಕ್ತಿ, ಕರ್ನಾಟಕ ಭಕ್ತಿ, ರಾಷ್ಟ್ರಭಕ್ತಿ ಇವೇ ನನ್ನ ಕಾವ್ಯದ ವಸ್ತುಗಳಾಗಿದ್ದವು.

ಮುಂದೆ, ಬುದ್ಧಿ ಬೆಳೆದಂತೆಲ್ಲ ಜನಸಾಮಾನ್ಯರೊಂದಿಗೆ ಸಹವಾಸವೂ ಬಂದು ಜನಸಾಮಾನ್ಯರ ಸುಖ-ದುಃಖಗಳೂ, ಆಶೆ-ಆಕಾಂಕ್ಷೆಗಳೂ, ಬೇಕು-ಬೇಡಗಳೂ ಗೊತ್ತಾದವು. ಆ ವಿಷಯದಲ್ಲಿ ಅನೇಕ ಪದ್ಯಗಳನ್ನು ಬರೆದುದೂ ಉಂಟು. ನಾನೊಬ್ಬ ಲೇಖಕನೆಂಬುದು ಹಿರಿಯರಾದ ದೇಶಭಕ್ತರಾದ ಗಂಗಾಧರರಾಯರಿಗೆ ಗೊತ್ತಾಗಿ ದೇಶಭಕ್ತ ಕರಗುಪ್ಪಿಕರರೂ ಪ್ರಾರಂಭಿಸಿ ಅರ್ಧಕ್ಕೆ ನಿಲ್ಲಿಸಿದ 'ಮಾತೃಭೂಮಿ' ಎಂಬ ಮಾಸಪತ್ರಿಕೆಯ ಹೊಣೆಯನ್ನು ನನ್ನ ಕಡೆಗೆ ಒಪ್ಪಿಸಿದರು. ಆಗ ನನಗೆ ೨೨ ವಯಸ್ಸು. ಮಾತೃಭೂಮಿಯ ಕೆಲವೊಂದು ಪುಟಗಳನ್ನು ಮುದ್ರಣಗೊಳಿಸಿ ದೇ.ಭ ಕರಗುಪ್ಪಿಕರ ಕೃಷ್ಣರಾಯರು ಮಧ್ಯದಲ್ಲಿಯೇ ಪ್ಲೇಗಿಗೆ ಬಲಿಯಾದರು. ನಾನು ಅದುವರೆಗೂ ಗದ್ಯದ ಒಂದು ಸಾಲನ್ನು ಬರೆದಿರಲಿಲ್ಲ. ಈಗ ಬರೆಯಲೇಬೇಕಾದ ಪ್ರಸಂಗ ಬಂದಿತು. ಗದ್ಯಲೇಖನವನ್ನು ಒಳ್ಳೆಯ ರೀತಿಯಿಂದ ಬರೆಯುವುದು ಎಷ್ಟೊಂದು ಕಷ್ಟವೆಂಬುದು ಆಗ ನನಗೆ ತಿಳಿದುಬಂದಿತು. ಕವಿಯಾಗಿದ್ದ ನನಗೆ ಲಾಕ್ಷಣಿಕ ಶಾಸ್ತ್ರ ಯಾವುದೂ ಗೊತ್ತಿರಲಿಲ್ಲ. ಕೇವಲ ತಾಳಕ್ಕೆ ಅನುಸಾರವಾಗಿ ಪದ್ಯಗಳನ್ನು ಹೆಣೆಯುತ್ತಿದ್ದೆ. ಪ್ರಾಚೀನ ಕನ್ನಡ ಕಾವ್ಯದ ಅಭ್ಯಾಸವೂ ನನಗೆ ಹೆಚ್ಚಾಗಿ ಇರಲಿಲ್ಲ. ಬರೆದ ಪದ್ಯಗಳು ಮಾತ್ರ ಲೋಕಪ್ರಿಯವಾಗಿ ಜನರ ಬಾಯಲ್ಲಿ ಆಡತೊಡಗಿದವು. ಗದ್ಯ ಬರೆಯುವದಕ್ಕೂ ಸರಿಯಾದ ವ್ಯಾಕರಣ ಜ್ಞಾನ ಇದ್ದಿತೆಂದು ಹೇಳಲಾರೆ. ನನ್ನ ಭಾಷೆಯ ಅಭ್ಯಾಸ ನಡೆದುದು ಮಾತೃಭೂಮಿಯ ಸಂಪಾದಕನಾದ ಮೇಲೆ. ಆಗಲೂ ಚಂಪೂ ಕಾವ್ಯದ ಅರ್ಥವು ನನಗೆ ಆಗುತ್ತಿರಲಿಲ್ಲ. ನಡುಗನ್ನಡ ಕಾವ್ಯಗಳನ್ನು ಓದಿ ಸರಾಗವಾಗಿ ಅರ್ಥಮಾಡಿಕೊಳ್ಳುತ್ತಲಿದ್ದೆ.

ನಾನು ರಾಷ್ಟ್ರೀಯ ಶಾಲೆಗೆ ಕನ್ನಡ ಶಿಕ್ಷಕನೆಂದು ಬಂದಮೇಲೆ ನಿಜವಾದ ವಾಙ್ಮಯದ ಅಭ್ಯಾಸಕ್ಕೆ ಪ್ರಾರಂಭಿಸಿದೆ. ಪಂಪ, ಪೊನ್ನ, ರನ್ನ, ರುದ್ರಭಟ್ಟರಂತಹರ ಮಹಾಕಾವ್ಯಗಳನ್ನು ನಾನೇ ಸ್ವಂತವಾಗಿ ಅಭ್ಯಾಸಮಾಡಿ ಅವುಗಳ ಮರ್ಮವನ್ನು ಅರಿತುಕೊಂಡೆ, ಗದ್ಯಲೇಖನವಲ್ಲಿಯೂ ಸ್ವಲ್ಪ ಪರಿಣತೆಯನ್ನು ಪಡೆದು ಮಾತೃಭೂಮಿಯನ್ನು ಒಂದು ವರ್ಷ ಕಾಲದವರೆಗೆ (೨೩-೨೪) ನಡೆಯಿಸಿಕೊಂಡು ಮುಂದುವರೆಯಿಸಿದೆ. ಆಗಲೇ ೨೪ನೆಯ ಡಿಶೆಂಬರ ತಿಂಗಳಲ್ಲಿ ಕನ್ನಡ ಕವಿಗಳಿಗೆ ಕೋರಿಕೊಂಡ ಸ್ವಾಗತಗೀತೆಯನ್ನು ನಾನೂ ರಚಿಸಿ ಮೇಲಿನ ಹಂತಕ್ಕೆ ಪಾತ್ರನಾಗಿ ನನ್ನ ಗೀತೆಯೇ ಮೇಲೆ ಬರುವಂತೆ ಕಾರಣನಾದೆ. ಮುಂದೆ ಧಾರವಾಡ ರಾಷ್ಟ್ರೀಯ ಶಾಲೆಗೆ ಶಿಕ್ಷಕನಾಗಿ ಬಂದಮೇಲೆ ನನ್ನ

ಅಭ್ಯಾಸ ವೈವಿಧ್ಯವು ಒಂದು ಮಟ್ಟಕ್ಕೆ ಬಂದಿತು. ಗದ್ಯ–ಪದ್ಯಗಳೆರಡರಲ್ಲಿಯೂ ಸಿದ್ಧಹಸ್ತನಾದೆನೆಂಬ ನಂಬುಗೆ ನನಗಾಯಿತು. ಈ ವೇಳೆಯಲ್ಲಿ ಅನೇಕ ಸಣ್ಣ ಕಥೆಗಳನ್ನು ಬರೆದೆ. ಇದಕ್ಕಾಗಿ ನಾನು ಸಾಮಾಜಿಕ ಕಷ್ಟ–ನಷ್ಟಗಳನ್ನು ಕೂಲಂಕಷವಾಗಿ ಅಭ್ಯಾಸ ಮಾಡಬೇಕಾಯಿತು. ಹಳ್ಳಿಯಲ್ಲಿ ಹುಟ್ಟಿದವನಾದುದರಿಂದ ಹಳ್ಳಿಗರ ಜೀವನ ಸಮಸ್ಯೆಗಳು ಎಂತಹವೆಂಬುದನ್ನು ನಾನು ಮೊದಲೇ ಅರಿತುಕೊಂಡಿದ್ದೆ. ಈಗ ಪಟ್ಟಣಕ್ಕೆ ಬಂದುದರಿಂದ ಪ್ರತಿಯೊಂದು ಸಾಮಾಜಿಕ ಸಮಸ್ಯೆಯನ್ನು, ರಾಜಕೀಯ ಸಮಸ್ಯೆಗಳನ್ನು ಅರಿತುಕೊಂಡೆ. ಇದೇ ನನ್ನ ಸಾಹಿತ್ಯದ ಎಂದರೆ ಬರವಣಿಗೆಯ ಮುಂದುವರೆತಕ್ಕೆ ಬಂಡವಾಳವಾಯಿತು. "ಮುದ್ದನಮಾತು" ಎಂಬ ನನ್ನ ಮೊದಲನೆಯ ಕವನಸಂಕಲನವೂ ನಿರ್ಮಾಣಗೊಂಡದ್ದು ಈಗಲೇ. ಅದರಲ್ಲಿ ಜೀವನದ ಅನೇಕ ಸಮಸ್ಯೆಗಳನ್ನು ಪಡಿಮೂಡಿಸಿ ತೋರಿಸಿದ್ದೇನೆ. ಸಣ್ಣ ಕಥೆಗಳಲ್ಲಿಯೂ ಮದುವೆಯ ಸಮಸ್ಯೆ, ಬಾಲ್ಯವಿವಾಹ ಸಮಸ್ಯೆ, ರೈತ ಮಾಲಿಕರ ಸಮಸ್ಯೆ, ಬಡತನ ಸಿರಿತನದ ಸಮಸ್ಯೆ, ಹೆಣ್ಣುಗಂಡಿನ ಸಮಸ್ಯೆ ಇವೆಲ್ಲವುಗಳನ್ನೂ ಪರಿಣಾಮಕಾರಿಯಾಗಿ ಚಿತ್ರಿಸಿದ್ದೇನೆ. 'ಕಾಣದಕೈ' 'ಮಾಲ್ಕಿಹಕ್ಕು' ಈ ಕಥೆಗಳಲ್ಲಿ ಹಳ್ಳಿಗರ ಜೀವನವನ್ನೇ ನಾವು ನೋಡಬಹುದು. ತಾಯಿ–ಮಗುವಿನ ಪ್ರೀತಿಯ ಸಂಬಂಧದಲ್ಲಿಯೂ ಎಂತಹ ಸಮಸ್ಯೆಗಳೂ,ವಾದ ಸೂಕ್ಷ್ಮತೆಯೂ ಇರುವವೆಂಬುದಕ್ಕೆ ನನ್ನ 'ಮುದ್ದಿನಮಾತು' ಕವನ ಸಂಕಲನದ ಕವನಗಳು ಒಂದು ಸಾಕ್ಷಿಯಾಗಿವೆ. ನನ್ನ ಕಾವ್ಯದ ಅಧ್ಯಯನವು ಬೇರೆ ಬೇರೆ ಕಾವ್ಯಗಳಲ್ಲಿ ಕವಿಯ ಸಮಕಾಲೀನ ಜೀವನದ ಚಿತ್ರಣವನ್ನು ಇದುವರೆಗೂ ಉಳಿದುಕೊಂಡುಬಂದ ಸಂಸ್ಕೃತಿಯ ಅವಶೇಷಗಳನ್ನೂ ಗುರುತಿಸಿ ಅವುಗಳನ್ನು ಟಿಪ್ಪಣಿ ಮಾಡಿಕೊಂಡು ಇರಿಸಿಕೊಂಡಿದ್ದೆ. ಆಗಲೇ ಮುಂಬಯಿ ಸರಕಾರದವರೂ ಗ್ರಂಥಗಳಿಗೆ ಬಹುಮಾನವನ್ನು ಇರಿಸಿ ಪ್ರಕಟಣೆ ಹೊರಡಿಸಿದುದನ್ನು ತಿಳಿದು ನನ್ನ ಗೆಳೆಯರ ಒತ್ತಾಯದಿಂದ ಒಂದು ಸಂಸ್ಕೃತಿ ಸಂಶೋಧಕ ಗ್ರಂಥವನ್ನು ಬರೆದೆ. ಅದು 'ಕರ್ನಾಟಕ ಜನಜೀವನ' ಎಂಬ ಗ್ರಂಥ. ಅದನ್ನು ಕರ್ನಾಟಕದ ವಿದ್ವಾಂಸರೆಲ್ಲ ಹೊಗಳಿ ಹಾಡಿದರು. ಆಗ ಸಂಶೋಧನೆಯ ಕುತೂಹಲವೂ ನನ್ನಲ್ಲಿ ಮೂಡಿಕೊಂಡಿತು.

ನಾನು ೧೯೩೮ನೆಯ ಇಸ್ವಿಯಲ್ಲಿ ಪ್ರಾರಂಭಿಸಿದ 'ಜಯಂತಿ' ಪತ್ರಿಕೆಯ ಸಂಪಾದಕತ್ವದಿಂದ ನನ್ನ ಲೋಕಾನುಭವವು ಹೆಚ್ಚಾಯಿತು. ಕನ್ನಡ ಸಾಹಿತ್ಯದಲ್ಲಿ ಯಾವುದರ ಕೊರತೆ ಇದೆ ಎಂಬ ವಿಚಾರವು ನಿಚ್ಚಳವಾಗಿ ಕಂಡಿತು. ವಿವಿಧ ವಿಷಯಗಳ ಲೇಖಕರೊಂದಿಗೆ ನನ್ನ ಪರಿಚಯವಾಗಿ ಆ ವಿಷಯಗಳಲ್ಲಿಯೂ ತಜ್ಞತೆಯನ್ನು ನನಗೆ ತಂದುಕೊಟ್ಟಿತು. ಈ ಕಾಲವು ನನ್ನ ಲೋಕಾನುಭವದ ಅಭಿವೃದ್ಧಿಗೆ ಮುಖ್ಯ ಕಾರಣವಾಯಿತೆಂದು ನನ್ನ ಅನಿಸಿಕೆ. ಗ್ರಂಥಗಳ ವಿಮರ್ಶೆ ಎಂದರೆ ಹೇಗಿರಬೇಕೆಂಬುದು ನನಗೆ ಅರ್ಥವಾಯಿತು. ಸಂಪಾದಕನಾಗಿ ನಾನು ನೂರಾರು ಗ್ರಂಥಗಳನ್ನು ವಿಮರ್ಶಿಸಿದ್ದೇನೆ. ವಿಮರ್ಶಾ ಸಾಹಿತ್ಯದ ಮಹತ್ವವು ಎಂಥದೆಂಬುದು ನನಗೆ ಮನದಟ್ಟಾಯಿತು. ಅನೇಕ ಪ್ರಾಚೀನ ಕನ್ನಡ ಕಾವ್ಯಗಳ ವಿಮರ್ಶೆಯನ್ನು ನಾನು ಬರೆದಿದ್ದೇನೆ. ಇದಕ್ಕೆಲ್ಲ ಕಾಲವೇ ಕಾರಣವಾಯಿತಲ್ಲದೇ ನಾನು ಮಾಡಬೇಕೆಂದು ಅಧ್ಯಯನ ಮಾಡಿದವನಲ್ಲ.

ಮೊದಲಿನಿಂದಲೂ ಕಾದಂಬರಿಗಳನ್ನು ಓದುವ ಗೀಳು ನನಗೆ, ಕನ್ನಡ ಒಂದೇ ಭಾಷೆಯ ಕಾದಂಬರಿಯಲ್ಲದೇ ಮರಾಠಿ, ಹಿಂದಿ, ಬಂಗಾಲಿ, ಪ್ರಸಿದ್ಧ ಕಾದಂಬರಿಗಳನ್ನು ಓದಿದ್ದೆನು. ಆದರೆ ಕಾದಂಬರಿಯನ್ನು ಬರೆಯಬೇಕೆಂಬ ಅಪೇಕ್ಷೆಯನ್ನು ಎಂದೂ ಹೊಂದಿರಲಿಲ್ಲ. ೧೯೩೪ನೇ ಇಸ್ವಿಯಲ್ಲಿ ಹದಿನೈದು ದಿನಗಳಲ್ಲಿ ಒಂದು ಸಾಮಾಜಿಕ ಕಾದಂಬರಿಯನ್ನು ಬರೆದು ಕೊಡುವ ಒಂದು ಒತ್ತಾಯದ ಪ್ರಸಂಗವೇ ಒದಗಿತು. ನಾನು ಒಪ್ಪಿಕೊಂಡು 'ಸುದರ್ಶನ' ಎಂಬ ಕಾದಂಬರಿಯನ್ನು ಬರೆದುಕೊಟ್ಟೆ. ಅದುವರೆಗೆ ಕನ್ನಡದಲ್ಲಿ ಅನುವಾದಿತ ಕಾದಂಬರಿಗಳೇ ಹೆಚ್ಚಾಗಿದ್ದವು. ಇಷ್ಟೇ ಕನ್ನಡದಲ್ಲಿಯೂ ಇಂಥ ಮೌಲಿಕ ಕಾದಂಬರಿಗಳು ಏಕೆ ಬರಬಾರದೆಂದು ನನಗೆ ಆಗಾಗ ಅನಿಸುತ್ತಿದ್ದಿತು ನಾನೇ ಬರೆಯುವ ಪ್ರಯತ್ನವನ್ನೇನು ಮಾಡಿರಲಿಲ್ಲ. ಈಗ ಮಾಡಿದೆ. ಸುದರ್ಶನ ಕಾದಂಬರಿಯು ಅಂದಿನಿಂದ ಇಂದಿನವರೆಗೆ ಏಳೆಂಟು ಸಲ ಮುದ್ರಿತವಾಗಿ ಹೊರಕ್ಕೆ ಬಂದಿದೆ. ತುಂಬ ಜನಪ್ರಿಯವಾಗಿ ಸುದರ್ಶನ ಕಾದಂಬರಿಯು ಕರ್ನಾಟಕದಲ್ಲಿ ಮೊತ್ತ ಮೊದಲಿನ ಸ್ವತಂತ್ರ ಕಾದಂಬರಿಗಳಲ್ಲಿ ಒಂದೆಂದು

ಹೆಸರುಗೊಂಡಿತು. ವಿಮರ್ಶಾಕಾರರೂ ಅದನ್ನು ಮೆಚ್ಚಿ ಹೊಗಳಿದರು. ಆಗ ನಾನು ಕಾದಂಬರಿಯನ್ನು ಬರೆಯಬಲ್ಲೆ ಎಂಬ ವಿಶ್ವಾಸ ನನ್ನಲ್ಲಿ ನೆಲೆಗೊಂಡಿತು. ಮುಂದೆ ವಿಜಯನಗರದ ೬೦೦ನೇ ವರ್ಷದ ಉತ್ಸವ ಕಾಲದಲ್ಲಿ ಇಂತಹದೇ ಇನ್ನೊಂದು ಪ್ರಸಂಗವು ಬಂದಿತು. ನಾನು ಮೊದಲಿನಿಂದಲೂ ಇತಿಹಾಸಪ್ರಿಯ. ವಿಜಯ ನಗರದ ಇತಿಹಾಸವನ್ನು ಬೇರೆಬೇರೆ ರೀತಿಯಿಂದ ಓದಿಕೊಂಡಿದ್ದೆ. ವಿಜಯನಗರದ ಇತಿಹಾಸದ ಮೇಲೆ ಸಂಪೂರ್ಣವಾಗಿ ೨೪ ಕಾದಂಬರಿಗಳನ್ನು ಬರೆಯಬೇಕೆಂದು ಸಂಕಲ್ಪಿಸಿದೆ. ಆದರೆ ನನ್ನ ಸಂಕಲ್ಪವು ಈಡೇರಲಿಲ್ಲ. 'ರಾಜಯೋಗಿ' ಎಂಬ ಮೊದಲನೆಯ ಕಾದಂಬರಿಯನ್ನು, 'ಅಶಾಂತಿ ಪರ್ವ' ಎಂಬ ಎರಡನೆಯ ಕಾದಂಬರಿಯನ್ನು ಬರೆದು ಮುಗಿಸಿದೆ. ಎರಡೂ ಪ್ರಸಿದ್ಧವಾದುವು. ಕಾದಂಬರಿಯ ಲೋಕದಲ್ಲಿಯೇ ಹೊಸ ರೀತಿಯವೆಂದು ವಿಮರ್ಶಕರಿಂದ ಮನ್ನಣೆ ಪಡೆದವು. ಆಮೇಲೆ ನಾನು ಮಾಸಪತ್ರಿಕೆಯ ಸಂಪಾದಕನಾಗಿ ನಿಂತುದರಿಂದ ಕಾದಂಬರಿ ಯನ್ನು ಬರೆಯಲು ಅವಕಾಶ ಸಿಗಲಿಲ್ಲ. ಮಾಸಪತ್ರಿಕೆಯ ಸಂಪಾದಕನಾಗಿ ಪರಿಸ್ಥಿತಿಗೆ ಸಂಬಂಧಿಸಿದ ಅನೇಕ ಲೇಖನ ಗಳನ್ನು ಮತ್ತು ಕವಿತೆಗಳನ್ನೂ ಸಮಾಜಿಕನ ಸಂವಚನ ಗಳನ್ನೂ ಒತ್ತಾಯದಿಂದಲೇ ಬರೆಯಬೇಕಾಯಿತು. ಪರಿಸ್ಥಿತಿಯ ಒತ್ತಾಯಕ್ಕಾಗಿ ಬರೆದರೂ ಅವಕ್ಕೆ ನನ್ನಲ್ಲಿ ಹುದಗಿಕೊಂಡಿದ್ದ ಪ್ರತಿಭೆ ಲೋಕಾನುಭವ, ಭಾಷಾ ಸಂಪತ್ತು, ಗ್ರಂಥಾಭ್ಯಾಸ ಸರಸದ್ವಿವೇಕ ಬುದ್ಧಿ, ಮಾನವ ಸ್ವಭಾವದ ಅಭ್ಯಾಸಗಳು ಸಂಪೂರ್ಣವಾಗಿ ತಮ್ಮ ನೆರ ವನ್ನು ನೀಡಿದವೆಂಬುದು ನನ್ನ ಅನುಭವದ ಮಾತು. ನಾನು ಹಳ್ಳಿಯಲ್ಲಿ ಹುಟ್ಟಿದವನಾದುದರಿಂದ ಜಾನಪದ ಸಾಹಿತ್ಯ ಪರಿಚಯವೂ ನನಗೆ ಮೊದಲಿನಿಂದಲೂ ಆಗಿ ದ್ದಿತು. ಅದರಲ್ಲಿ ಹುದುಗಿದ ಸಹಜ ಸೌಂದರ್ಯವೆಂಥ ದೆಂಬುದನ್ನು ನಾನು ಅರಿತು ಕೊಂಡಿದ್ದೆ. ಜಾನಪದ ಮೂಲಕ ಕರ್ನಾಟಕಕ್ಕೆ ಮೊದಲು ಪರಿಚಯ ಮಾಡಿ ಕೊಟ್ಟವರಲ್ಲಿ ಮೊದಲಿಗನೂ ನಾನೇ ಎಂದು ಹೇಳಬೇಕು. ೧೯೨೨ರಲ್ಲಿಯೇ ಜಾನಪದ ಸಾಹಿತ್ಯದ ಒಂದು ವಿಭಾಗದ ಬೀಸುವಕಲ್ಲಿನ ಪದಗಳ ಸೊಗಸಿನ ವಿಚಾರವನ್ನು ಕುರಿತು ಪ್ರಬಂಧವನ್ನು ಬರೆದಿದ್ದೇನೆ. 'ಕೆರೆಗೆಹಾರ' ಎಂಬ ಕೋಲಾ ಪದವನ್ನು ಸಂಗ್ರಹಿಸಿ 'ಜಯಕರ್ನಾಟಕದಲ್ಲಿ ಮೊದಲು ನಾನೇ ಪ್ರಕಟಿಸಿದ್ದೇನೆ. ಪ್ರಕಟಿಸಿದುದೆಲ್ಲವೂ ರಸವತ್ತಾ ಗಿದೆ ಎಂದು ವಿಮರ್ಶಕರು, ವಾಚಕರೂ ಕೊಂಡಾಡಿ ದರು. ಮುಂದೆ ಬರೆದ 'ಮಂಗಳ ಮದುವೆ' ಎಂಬ ಸಾಮಾಜಿಕ ಕಾದಂಬರಿಯು ಮುಂಬಯಿ ಸರಕಾರದಿಂದ ಮೊದಲನೆಯ ಕಾದಂಬರಿ ಬಹುಮಾನ ಪಡೆಯಿತು.

ಹರಿದಾಸ ಸಾಹಿತ್ಯವು ನನ್ನ ಪ್ರೀತಿಯ ವಿಷಯ. ಆದರೆ ಅದರಲ್ಲಿ ಕರ್ಣ ಪರಂಪರೆಯಿಂದ ಮತ್ತು ಬಾಯಿಂದ ಬಾಯಿಗೆ ಅನೇಕ ದಿನ ನಡೆದು ಬಂದುದ ರಿಂದ ಅದರಲ್ಲಿ ಅನೇಕ ಭಾಷಾ ದೋಷಗಳು ಸೇರಿ ಕೊಂಡಿವೆ ಎಂಬುದನ್ನು ನಾನು ಕಂಡುಕೊಂಡೆ. ಅದರ ಅಭ್ಯಾಸವನ್ನು ಸರಿಯಾಗಿ ಸೂಕ್ಷ್ಮವಾಗಿ ಮಾಡಿಕೊಂಡೆ. ಪುರಂದರದಾಸರ ೪೦೦ ನೆಯ ವರ್ಷದ ಉತ್ಸವ ಮಂಡಲ ಧಾರವಾಡ ಅವರು ಅವುಗಳನ್ನು ತಿದ್ದಿ ಪ್ರಕಟಿಸುವ ಭಾರವನ್ನು ನನ್ನ ಕಡೆಗೆ ವಹಿಸಿಕೊಟ್ಟರು. ನಾನು ಕಾರ್ಯವನ್ನು ಕೈಕೊಂಡು ಆರು ಸಂಪುಟಗಳಲ್ಲಿ ಪುರಂದರದಾಸರ ಪದ್ಯಗಳನ್ನು ಸಂಪಾದನೆ ಮಾಡಿದು ದಲ್ಲದೇ ಒಂದೇ ಸಂಪುಟದಷ್ಟು ಕನಕದಾಸರ ಕೀರ್ತನೆ ಕೀರ್ತನೆಗಳನ್ನು ಸಂಪಾದನೆ ಮಾಡಿದ್ದೇನೆ.

ನಾನು ಬರೆದ ಗದ್ಯವಾಗಲಿ ಎಲ್ಲ ಪದ್ಯವಾಗಲಿ ಜನಪ್ರಿಯವಾಗುವದೆಂದು ನಂಬುಗೆ ಉಂಟಾಗಿ ಹೆಚ್ಚು ಹೆಚ್ಚಾಗಿ ಸಾಹಿತ್ಯದ ವಿವಿಧಾಂಗಗಳನ್ನೂ ಕುರಿತ ಕೃತಿ ಗಳನ್ನು ಬರೆಯತೊಡಗಿದೆ. ಜನರಿಂದ ಆದರವೂ ಸರ ಕಾರದಿಂದ ಮರ್ಯಾದೆಯೂ ನನಗೆ ದೊರೆತವು. ಈಗ ನಾನು ರೋಗದಿಂದ ನಿರುಪಾಯನಾಗಿದ್ದೇನೆ. ನಾನು ಮಾಡಬೇಕಾದ ಲೇಖನಕಾರ್ಯ ತುಂಬ ಇದೆ. ರೇಡಿಯೋ ಕಾರ್ಯಾಲಯವು ಧಾರವಾಡಕ್ಕೆ ಬಂದ ಮೇಲೆ ಅದು ನನಗೊಂದು ಹೊಸಪಾಠವನ್ನೇ ಕಲಿಸಿತು. ಅದಕ್ಕೆ ಅವಶ್ಯಕವಾದ ಸಾಹಿತ್ಯದ ವಿವಿಧರೂಪಕಗಳನ್ನೂ, ಪ್ರಬಂಧಗಳನ್ನೂ ನೂರಾರೂ ಬರೆದು ಕೊಟ್ಟಿದ್ದೇನೆ. ಇದೆಲ್ಲವನ್ನು ಬರೆಯಲು ನನ್ನ ವಿಶಿಷ್ಟವಾದ ಸಾಹಿತ್ಯಿಕ ಸಂಸ್ಕಾರವೂ ದೀರ್ಘವಾದ ಅಭ್ಯಾಸವೂ ಮುಖ್ಯಕಾರಣ ಗಳಾಗಿವೆ. ಹೊರತು ನಾನು ಬರೆದುದಕ್ಕೆ ವಿಶಿಷ್ಟವಾದ ಆಂತರಿಕ ಕಾರಣಗಳೂ ಇಲ್ಲ.

'ಸಿರಿಗನ್ನಡಂಗೆಲ್ಗೆ' ● ●

—ಎನ್. ನಾರಾಯಣ ಬಲ್ಲಾಳ

# ನಾ ಕಂಡ ಶ್ರೀ ಆನಂದಕಂದರು

ಜೀವನದ ಎಲ್ಲ ರೀತಿಯ ದುರಂತಗಳನ್ನು ನುಂಗಿ ನೀರು ಕುಡಿದ ಪ್ರಶಾಂತ ಮುಖಮುದ್ರೆ; ನಿರಾಶೆಯ ಅಂಚಿನಲ್ಲೂ ಆಸೆಯ ಬೆಳಕಿನಲ್ಲಿ ಮುನ್ನಡೆಯುವ ಭರವಸೆ ಹೊಂದಿದ ಭಾವಸಮತ್ವ; ಧ್ಯೇಯ, ಕ್ರಿಯಾ ಚೈತನ್ಯಗಳಿಂದ ಮೆರಗು ಹೊಂದಿದ ವ್ಯಕ್ತಿತ್ವ ಚುಟುಕಿನಲ್ಲಿ ಈ ರೀತಿ "ಕವಿಭೂಷಣ" ಬೆಟಗೇರಿ ಕೃಷ್ಣಶರ್ಮರನ್ನು ವರ್ಣಿಸಬಹುದು.

ಶ್ರೀ ಶರ್ಮರು ಬೆಳಗಾವಿ ಜಿಲ್ಲೆಯ ಬೆಟಗೇರಿಯ ಒಂದು ಕುಲೀನ ಮಧ್ಯಮ ವರ್ಗಕ್ಕೆ ಸೇರಿದ ಮಾಧ್ವ ಸಂಪ್ರದಾಯದವರು. ಬಾಲ್ಯದಿಂದಲೇ ಕವಿ ಹೃದಯವನ್ನು ಹೊತ್ತುಕೊಂಡು ಬಂದ ಇವರ ಬಗ್ಗೆ ತಂದೆ-ತಾಯಿಗಳಿಗೆ ತುಂಬು ಅಭಿಮಾನ. ತಾಯಿಯು ಬೆಳಗಿನ ಜಾವದಲ್ಲಿ ಹೇಳುವ ಉದಯ ರಾಗದ ಗೀತೆಗಳು, ಇತರ ಜಾನಪದ ಹಾಡುಗಳು ಬಾಲಕನ ಸುಪ್ತ, ಕಾವ್ಯ ಪ್ರತಿಭೆಗೆ ಸ್ಫೂರ್ತಿ ನೀಡಿದವು.

ಹುಡುಗ ಹೆತ್ತವರ ಅಕ್ಕರೆಯಲ್ಲಿ ಬೆಳೆಯುವ ಪುಣ್ಯ ಪಡೆದಿರಲಿಲ್ಲವೆಂತಲೇ ತಂದೆ ಮೊದಲು, ಅನಂತರ ತಾಯಿ ಕುಮಾರ ಕೃಷ್ಣನನ್ನು ತಬ್ಬಲಿಮಾಡಿ ಸ್ವರ್ಗಡೆಗೆ ನಡೆದುಬಿಟ್ಟರು. ಹದಿನೆಂಟರ ಹರೆಯದಲ್ಲೇ ಏಕಾಂಗಿಯಾಗಿ ಊರು ಬಿಟ್ಟ ಶ್ರೀ ಶರ್ಮರಿಗೆ ಹೊಟ್ಟೆಯ ಹೋರಾಟವೇ ಒಂದು ಸಮಸ್ಯೆಯಾಯಿತು. ಮಾಸ್ತರಿಕೆಯಿಂದ ಜೀವನ ಆರಂಭಿಸುವ ಹೊತ್ತಿಗೇ ಪ್ರಸಿದ್ಧ ಕವಿ 'ಕಾವ್ಯಾನಂದ'ರು (ನರಸಿಂಹಾಚಾರ್ಯ ಪುಣೇಕರ) ಗುರುವಾಗಿ ಅವರ ಶಿಷ್ಯನೆಂಬ ಭಾವನೆಯಲ್ಲೇ ಕಿತ್ತೂರಿಗೆ ಅವರೊಂದಿಗೆ ನಡೆದರು.

೧೯೨೯ ರಲ್ಲಿ ಕರ್ನಾಟಕ ಏಕೀಕರಣ ಸಮ್ಮೇಳನ ಧಾರವಾಡದಲ್ಲಿ ಜರುಗಿದಾಗ ಬೆಟಗೇರಿಯವರು ಅಲ್ಲಿ ಸ್ವಯಂಸೇವಕರಾಗಿ ದುಡಿದರು. ಶ್ರೀ ಕೆರೂರ, ಶ್ರೀ ಹುಯಿಲಗೋಳ ನಾರಾಯಣ ರಾಯರಂತಹವರ ದರ್ಶನ, ಒಡನಾಟದಿಂದ ಇವರ ಕನ್ನಡದ ಚೇತನ ಮತ್ತಿಷ್ಟು ಪ್ರಭಾವಯುತವಾಯಿತು. ಹಾಗೆಯೇ ರಾಜಕೀಯ ಸ್ವಾತಂತ್ರ್ಯ ಚಳುವಳಿಯಿಂದಲೂ ಆಕರ್ಷಿತರಾದ ಶ್ರೀ ಬೆಟಗೇರಿಯವರು ಖಾದಿಧಾರಿಗಳಾದರು. ಅಂದಿನಿಂದ ಇಂದಿಗೂ ಅವರ ಖಾದಿವ್ರತ ಅನೂಚಾನವಾಗಿ ಆಚರಿಸಲ್ಪಟ್ಟಿದೆ,

ಶ್ರೀ ಶರ್ಮರನ್ನು ಉತ್ತರ ಕರ್ನಾಟಕದವರೆಂದು ಗುರುತಿಸಬೇಕಾದರೆ ಅವರನ್ನು ಮಾತಾಡಿಸಿಯೇ ನೋಡಬೇಕು. ಮಾತಾಡಿಸುವವನು ಯಾವ ಪ್ರದೇಶದವನೋ ಆ ಪ್ರದೇಶದ ಶೈಲಿಯಲ್ಲೇ ಮಾತಾಡುವ ಅವರನ್ನು ಆಗ ಕೂಡ ಸುಲಭವಾಗಿ ಇಂತಹ ಪ್ರದೇಶಕ್ಕೆಂದು ಸಹ ಸಾವಿತರಣೆ ಮಾಡುವಂತಿಲ್ಲ

ಖಾದಿಯ ಕಚ್ಚೆ, ಅದರ ಮೇಲೊಂದು ಖಾದಿ ಅಂಗಿ, ಬ್ರಹ್ಮವಸ್ತ್ರದಂತೆ ಸುವ್ಯವಸ್ಥಿತವಾಗಿ ಹೊದ್ದ ಖಾದಿ ಶಾಲು-ಇವೇ ಅವರ ಬದಲಾಗದ ಉಡುಪು. ಇದು ಅಚ್ಚುಕಟ್ಟೂ ಹೌದು ನಿರಾಡಂಬರವೂ ನಿಜ. ವ್ರತಬದ್ಧನಿಯಮವೂ ಸಹಜ, ಬೆಂಗಳೂರಿನ ಆರ್ಯವಿದ್ಯಾಶಾಲೆಯಲ್ಲಿ ಕೆಲಸ ಮಾಡುವಾಗ ಆಗಿನ ಸಂಸ್ಥಾನಿಕ ನಿಯಮದಂತೆ ಶಿಕ್ಷಕರು ತಲೆಗೆ ಮುಂಡಾಸು ಹೊತ್ತುಕೊಳ್ಳಲೇಬೇಕಾಗಿತ್ತು. ಇದು ಶ್ರೀ ಶರ್ಮರಿಗೆ ಸರಿಬರ

ಲಿಲ್ಲ. ಕೆಲಸಕ್ಕೆ ರಾಜೀನಾಮೆ ಕೊಟ್ಟು ಹೊರಬಂದರು. ವೇಷ ಮನುಷ್ಯನ ಅಂತರಂಗಕ್ಕೆ ಕೈಗನ್ನಡಿಯಾಗಬಲ್ಲ ದೆಂಬುದು ಬೆಟಗೇರಿಯವರ ವಿಷಯದಲ್ಲಂತೂ ಖಂಡಿತ.

ಬೆಳಗಾವಿಯಲ್ಲಿ ಪತ್ರಿಕೋದ್ಯಮದ ನಾಂದಿ ಹಾಡಿದ ಬೆಟಗೇರಿಯವರು ಅಲ್ಲಿ ಕೆಲವು ಕಾಲ 'ಮಾತೃ ಭೂಮಿ'ಯ ಸಂಪಾದಕರಾಗಿ ಕೆಲಸ ಮಾಡಿದರು. ಆ ನಂತರ ಧಾರವಾಡ ರಾಷ್ಟ್ರೀಯ ಮಹಾ ವಿಶ್ವವಿದ್ಯಾ ಲಯದಲ್ಲಿ ಶಿಕ್ಷಕರಾಗಿದ್ದುಕೊಂಡು, 'ಸ್ವಧರ್ಮ' ಮಾಸ ಪತ್ರಿಕೆಯ ಸಂಪಾದಕರಾಗಿದ್ದರು. ೧೯೨೧ರಿಂದ ಬೆಂಗಳೂರಿನಲ್ಲಿ ನಾಲ್ಕು ವರ್ಷಗಳ ಕಾಲ ಶಿಕ್ಷಕರಾಗಿ ಕೆಲಸ ಮಾಡಿದರು. ಅಲ್ಲಿಂದ 'ಜಯಕರ್ನಾಟಕ'ಕ್ಕಾಗಿ ಧಾರ ವಾಡಕ್ಕೆ ಬಂದರು.

"ಆಗಿನ ಎರಡು ವರ್ಷಗಳ ನನ್ನ ಧಾರವಾಡದ ವಾಸ ನನ್ನ ಜೀವನ ವಿಕಾಸಕ್ಕೆ ತುಂಬ ಸಹಕಾರಿ ಯಾಯಿತು. ಕನ್ನಡದ ಅಭಿಮಾನಿಗಳು ಅನೇಕ ಹಿರಿ ಯರ ಪರಿಚಯವಾಯಿತು. ಹಿರಿಯ ಗೆಳೆಯರಾದ ಶ್ರೀ ದತ್ತಾತ್ರಯ ಬೇಂದ್ರೆಯವರು, ಶ್ರೀ ಶಂ. ಬಾ. ಜೋಶಿ ಯವರು ನನ್ನನ್ನು ತೀರ ಆತ್ಮೀಯನನ್ನಾಗಿ ಮಾಡಿ ಕೊಂಡರು. 'ಮುದ್ದನ ಮಾತು' ಎಂಬ ನನ್ನ ಮೊದಲ ಕಾವ್ಯ ಸಂಕಲನ ಮೂರ್ತೀಭವಿಸಿದುದು ಇದೇ ಕಾಲದಲ್ಲಿ. ಹಿರಿಯರಾದ ಶ್ರೀ ಮಾಸ್ತಿಯವರು ಇನ್ನೂ ಆಕೃತಿ ರೂಪುಗೊಳ್ಳುತ್ತಿರುವಾಗಲೇ ನೋಡಿ, ಅದರ ಬಗ್ಗೆ ಮೆಚ್ಚುಗೆಯನ್ನು ತೋರಿಸಿದರು. ತಾವೇ ಅದರ ಮುದ್ರಣ ವ್ಯವಸ್ಥೆ ಮಾಡುವುದಾಗಿಯೂ ಹೇಳಿದರು....

'ಜಯ ಕರ್ನಾಟಕ'ದಲ್ಲಿ ಕೆಲ ಕಾಲ ದುಡಿದ ಮೇಲೆ ಆ ಪತ್ರಿಕೆಯ ಒಡೆತನದ ವಿಷಯದಲ್ಲಿ ಆದ ಸ್ಥಿತ್ಯಂತರ ಗಳಿಂದ ಬೆಟಗೇರಿಯವರ ದಾರಿ ಬೇರೆಯಾಯಿತು.

ಅನಂತರ ಸಂಪಾದಕತ್ವದಲ್ಲಿ ಆರಂಭವಾದ 'ಜಯಂತಿ'ಯ ಮನ್ವಂತರ ನಾಲ್ವರು ವ್ಯವಹಾರ ದೃಷ್ಟಿಯ ಬಂಡವಳವುಳ್ಳ ಮಿತ್ರರು ಮರಾಠಿಯ 'ಕಿರ್ಲೋಸ್ಕರ' ದಂಥ ಪತ್ರಿಕೆಯನ್ನು ಕನ್ನಡದಲ್ಲಿ ಹೊರ ಡಿಸುವ ಬೆಟಗೇರಿಯವರ ಕನಸಿಗೆ ಬೆಂಬಲವಾಗಿ ನಿಂತರು. 'ಕಿರ್ಲೋಸ್ಕರ'ದಂತೆ ಇದೂ ವ್ಯವಹಾರ ದೃಷ್ಟಿಯಿಂದ ಯಶಸ್ವಿಯಾಗುವುದೆಂಬುದು ಅವರ ನಿರೀಕ್ಷೆಯಾಗಿತ್ತು.

ಆದರೆ ಕನ್ನಡದ ನಾಡು ನಾಲ್ಕೈದು ಅಧಿಪತ್ಯದಲ್ಲಿ ಹಂಚಿಹೋಗಿತ್ತು. ಸಂಸ್ಕೃತಿಯಲ್ಲೂ ಪರಾಧೀನತೆ, ಭಾಷೆಯಲ್ಲೂ ಅನೇಕತೆ, ಜನರಲ್ಲೂ ವಿಭೇದಗಳಿಂದಾಗಿ ಒಂದು ಪತ್ರಿಕೆ ಈ ಎಲ್ಲ ವಿಭಾಗಗಳೊಂದಿಗೆ ಸಾಮರಸ್ಯ ವಾಗಿ ಬದುಕುವುದೇ ಒಂದು ಸಾಹಸವೆಂಬ ಅರಿವು ಮೂಡಲು ಶರ್ಮರಿಗೆ ತಡವಾಗಲಿಲ್ಲ. ಆದರೂ ಅದನ್ನು ಆ ನಾಲ್ಕು ಜನ ವ್ಯವಹಾರಿ ಮಿತ್ರರು ಮೂರು ವರ್ಷಗಳ ತನಕ ನಡೆಸಿದರು. ಮುಂದೆ ಅವರು ಹಿಂಜರಿದಾಗ 'ಜಯಂತಿ'ಯನ್ನು ತಾವೇ ನಡೆಸಲು ಶರ್ಮರು ನಿರ್ಧರಿಸಿ ದರು. ಅಂತೆಯೇ ೨೩ ವರ್ಷ, ೨ ತಿಂಗಳು ಕಾಲ ಆ ಪತ್ರಿಕೆ ನಡೆಸಿದರು.

ಆದರೆ ಅವು ಅವರ ಬದುಕಿನ ಅತಿ ಕಠಿಣ ದಿನಗಳೂ ಆಗಿದ್ದವು. ಈ ಬಗ್ಗೆ ಅವರೇ ಒಂದು ಕಡೆ ತಮ್ಮ ಲೇಖನದಲ್ಲಿ ಹೀಗೆಂದಿದ್ದಾರೆ :

'ಜಯಂತಿ' ನನ್ನ ಜೀವನದ ಯೋಗಕ್ಷೇಮವನ್ನು ನೋಡುವಂತಹ ಸಾಮರ್ಥ್ಯವನ್ನು ಎಂದೂ ಪಡೆಯಲಿಲ್ಲ. ಕೊನೆಯ ವರೆಗೂ ಅದರ ಯೋಗಕ್ಷೇಮವನ್ನು ನಾನೇ ನೋಡಬೇಕಾಯಿತು. ಕೊನೆಕೊನೆಯ ಏಳು ವರ್ಷಗಳ ಅವಧಿಯಲ್ಲಂತೂ ದೈವ ನನ್ನ ಸತ್ವ ಪರೀಕ್ಷೆಯನ್ನೇ ಮಾಡಿತೆಂದು ಹೇಳಬಹುದು. ನಿಜವಾಗಿಯೂ ನನಗೆ "ಸಹಧರ್ಮಿಣಿ"ಯಾಗಿದ್ದ ನನ್ನ ಹೆಂಡತಿಯನ್ನು ಕ್ಷಯ ರೋಗ ಅಂಟಿಕೊಂಡಿತು. ಆಕೆಯನ್ನೂ ಜಯಂತಿ ಯನ್ನೂ ಬದುಕಿಸಿಕೊಳ್ಳಬೇಕೆಂಬ ನನ್ನ ಪ್ರಯತ್ನ ನನ್ನನ್ನು ಸಾಲಗಾರನನ್ನಾಗಿಯೂ ಮಾಡಿತು. ನನ್ನ ಯೋಗ್ಯತೆಯನ್ನು ಮೀರಿ ನಾನು ರೋಗ ಚಿಕಿತ್ಸೆಗಾಗಿ ಹಣದ ಹೊಳೆ ಹರಿಸಿದರೂ ಹೆಂಡತಿಯನ್ನು ಬದುಕಿಸಿ ಕೊಳ್ಳಲಾರದಾದೆ. ದುರ್ದೈವಿಯಾದ ನನ್ನನ್ನೂ ನಾಲ್ಕು ಚಿಕ್ಕಮಕ್ಕಳನ್ನೂ ಬಿಟ್ಟು ಆಕೆ ಹೊರಟೇ ಹೋದಳು. (೧೯೫೭ನೇ ಮಾರ್ಚ). ಜಯಂತಿ ಯಿಂದ ನಿವೃತ್ತನಾಗುವುದಕ್ಕೆ ಹೆಂಡತಿಯ ಅಗಲಿಕೆಯೂ ಒಂದು ಕಾರಣವೆನ್ನಬಹುದು.

ಆದರೂ ಅವರ ಕೈಯಲ್ಲಿ 'ಜಯಂತಿ' ಕನ್ನಡ ಮಾಸಿಕ ಪತ್ರಗಳಲ್ಲಿ ಉನ್ನತ ಸ್ಥಾನ ಪಡೆದುಕೊಂಡದ್ದು ನಿಜ. 'ಜಯಂತಿ' ಯಲ್ಲಿ ಲೇಖನ ಬರುವುದು ಕಿರಿಯ ಲೇಖಕರಿಗೆ ಸಾಹಿತ್ಯಲೋಕದ ಪ್ರವೇಶಪತ್ರಿಕೆಯಂತಿತ್ತು. ಹಿರಿಯರಿಗೂ ಅದು ಅಭಿಮಾನಾಸ್ಪದವೇ ಆಗಿತ್ತು. 'ಜಯಂತಿ' ಯಲ್ಲಿ ಅವರ ಸಂಪಾದಕೀಯ ನೀತಿಗಳನ್ನು ಕುರಿತು ಪ್ರಶ್ನಿಸಿದಾಗ ಅವರು ಹೇಳಿದರು :

"ನಾನು ಆ ಪತ್ರಿಕೆಯ ಮೂಲಕ ಕನ್ನಡ ಪತ್ರಿಕಾ ರಂಗದಲ್ಲಿ ಹಲವು ಹೊಸತುಗಳನ್ನು ಸೃಷ್ಟಿಸಿದೆ. ಲೇಖನ ಆಯುವಾಗ ಹೊಸಬರು, ಹಿರಿಯರು ಎಂಬ ಭೇದ ತರಲಿಲ್ಲ. ನಾಡಿನ ಎಷ್ಟೋ ಪ್ರಸಿದ್ಧ ಲೇಖಕರ ಲೇಖನ ಗಳನ್ನು 'ಚೆನ್ನಾಗಿಲ್ಲ, ಬೇರೆ ಬರೆದುಕೊಡಿ' ಎಂದು ಹಿಂತಿ ರುಗಿಸಿದ್ದೂ ಇದೆ. ಹೊಸಬರು ಬರೆದ ಪ್ರಥಮ ಕಥೆ ಯನ್ನೂ ನಾನು ಕೂಡಲೇ ಪ್ರಕಟಿಸಿದ್ದೂ ಇದೆ. ಲೇಖನ ಹಿಡಿದಾಗ ಯಾವ ತಾರತಮ್ಯ, ದಾಕ್ಷಿಣ್ಯಕ್ಕೂ ಒಳಗಾಗ ಲಿಲ್ಲ. ಕನ್ನಡ ಚಳುವಳಿಯ ಕಾಲದಲ್ಲಿ 'ಕನ್ನಡ ಸೈನಿಕ' ಎಂಬ ಪುರವಣಿ ಹೊರಡಿಸುತ್ತಿದ್ದೆ."

ಆದರೆ ಈ ಭವ್ಯ ಸಾಹಸ ಕೊನೆಗೊಳ್ಳಲೇಬೇಕಾ ಯಿತು. ಸಾಲ ತೀರಿಸಲು ಬೆಟಗೇರಿಯವರು ಒಬ್ಬ ಪಠ್ಯ ಪುಸ್ತಕ ಪ್ರಕಾಶಕರಿಗಾಗಿ ಪಠ್ಯ ಪುಸ್ತಕ ಪರಿಶೋಧ ನೆಯ ಕಾರ್ಯದಲ್ಲಿ ತಮ್ಮ ಮಿದುಳನ್ನು ಹದಿನೆಂಟು ತಿಂಗಳ ಕಾಲ ಕರಗಿಸಿದರು. "ವಿಕ್ರಮಾದಿತ್ಯನಿಗೆ ಶನಿ ಹಿಡಿದ ಕಾಲದಲ್ಲಿ ಆತ ಗಾಣಿಗನಲ್ಲಿ ಗಾಣ ಹೊಡೆಯಬೇಕಾಯಿ ತಂತೆ. ಹಾಗೆ ನನ್ನ ಅವಸ್ಥೆಯೂ ಆಯಿತು" ಎಂದರು ಶರ್ಮರು.

ಶ್ರೀ ಶರ್ಮರ ಉದ್ವೇಗದ ಮಾತು ನನ್ನ ಮನ ಸ್ಸನ್ನು ಕಲಕಿತು. ನಾನು ವಿಚಾರ ಅಂತರ ಮಾಡಲು ಅವರೊಂದಿಗೆ ಕೇಳಿದೆ "ನೀವು ಕಾದಂಬರಿ ಕ್ಷೇತ್ರದಲ್ಲಿ ಅಡಿಯಿಟ್ಟುದು ಯಾವಾಗ ?"

ಅಂತರ್ಮುಖಿಯಾಗಿದ್ದವರು ಕನಸಿನಿಂದ ಎಚ್ಚತ್ತ ವರಂತೆ ಮಾತು ಮುಂದುವರೆಸಿದರು :

"ಹೌದು, ನಾನು ಕಾದಂಬರಿ ಬರೆದಾಗ ಆಗಿನೂ ಹೊಸ ಶೈಲಿಯ ಈಗಿನ ಕಾದಂಬರಿಗಳು ಚಿಗುರೊಡೆ ದಿರಲಿಲ್ಲ. ಮನೋಹರ ಗ್ರಂಥಮಾಲೆಯ ಪುಷ್ಪವಾಗಿ ಪ್ರಕಟವಾದ ನನ್ನ ಪ್ರಥಮ ಕಾದಂಬರಿ 'ಸುದರ್ಶನ' ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಒಂದು ಹೊಸ ಪಥ ತೋರಿಸಿತು (ಇದರ ೫ನೇ ಆವೃತ್ತಿ ಈಗ ಪ್ರಕಟವಾಗಿದೆ) ನಾನು ಈ ಕಾದಂಬರಿಯನ್ನು ವಿಚಿತ್ರ ಉತ್ಸಾಹಕ್ಕೆ ಬಲಿಬಿದ್ದು ಏಳೇ ಏಳು ದಿನಗಳಲ್ಲಿ ಬರೆದಿದ್ದರೂ, ಇನ್ನೂ ಅದನ್ನು ಪರಿಪುಷ್ಟವಾಗಿ ಚಿತ್ರಿಸಬಹುದೆಂದು ಆಶಿಸಿ ದ್ದರೂ, ನನಗೇ ಅದು ಅಷ್ಟು ತೃಪ್ತಿ ಕೊಡದಿದ್ದರೂ, ಆ ಕಾದಂಬರಿ ಪಡೆದ ಅಪಾರ ಜನಪ್ರಿಯತೆ ಹಾಗೂ ಪ್ರಶಂಸೆ ನನಗೆ ಹೊಸ ಸ್ಫೂರ್ತಿ ನೀಡಿತೆನ್ನಬಹುದು. ನನ್ನ ಆ ಕಾದಂಬರಿಯ ಮೊದಲ ಆವೃತ್ತಿ ಆರೇ ತಿಂಗ ಳಲ್ಲಿ ಮಾರಾಟವಾಗಿ ಒಂದು ದಾಖಲೆಯನ್ನೇ ಸ್ಥಾಪಿ ಸಿತು."

"ನಾನು ರಾಜಯೋಗಿ" 'ಅಶಾಂತಿಪರ್ವ'ಗಳನ್ನು ಬರೆದಾಗ ಅವೆರಡು ಐತಿಹಾಸಿಕ ಕಾದಂಬರಿಗಳಿಗೆ ಕನ್ನಡದ ಜನತೆ ಅಪಾರ ಮನ್ನಣೆ ಕೊಟ್ಟರೆಂಬುದು ನಿಜ. 'ಅಶಾಂತಿ ಪರ್ವಕ್ಕೆ' ೧೯೩೭ ರಲ್ಲಿ ದೇವರಾಜ ಬಹುಮಾನ ದೊರ ಕಿತು. ಆದರೆ ಆ ಎರಡು ಕಾದಂಬರಿಗಳೂ ದುಃಖಾತ ಗಳು. ಹಾಗೆಯೇ ಆ ಎರಡೂ ಕಾದಂಬರಿ ಬರೆಯುವಾಗ ನನ್ನ ಜೀವನದಲ್ಲಿ ಎರಡು ಕೌಟುಂಬಿಕ ದುರಂತಗಳು ಸಂಭವಿಸಿದವು. 'ರಾಜಯೋಗಿ' ಯಲ್ಲಿ ರಾಜಶೇಖರ ಚಿಕ್ಕಪ್ಪನ ಕೊಲೆ ಮಾಡಿದ ಪ್ರಕರಣವನ್ನು ಬರೆದ ದಿನವೇ ಬರೇ ಎರಡು ತಿಂಗಳ ಹಿಂದೆ ಮದುವೆಯಾದ ನನ್ನ ತಮ್ಮನ ಹೆಂಡತಿ ಅಕಸ್ಮಾತ್ತಾಗಿ ತೀರಿಕೊಂಡ ಸುದ್ದಿ ಬಂತು. 'ಅಶಾಂತಿ ಪರ್ವ'ದಲ್ಲಿ ರಾಜಶೇಖರನ ಕೊಲೆಯ ಪ್ರಕರಣವನ್ನು ಬರೆದು ಮುಗಿಸಿದೊಡನೆ ನನ್ನ ಅಣ್ಣನ ಹೆಂಡತಿಯ ಮರಣ ವಾರ್ತೆ ಬಂತು. 'ಮಲ್ಲಿಕಾರ್ಜುನ' ವೈಯಕ್ತಿಕ ದುರಂತದಿಂದ ಮುಕ್ತವಾಗಿರಲಿಲ್ಲ. ಅದರಲ್ಲಿ ಚಂಪಲಾಂಬಿಕೆಯ ಮರಣದ ಪ್ರಕರಣ ಬರೆದ ಕೆಲವಾರ ಗಳಲ್ಲೇ ನನ್ನ ಪತ್ನಿ ಮೃತಳಾದಳು. ಕಾದಂಬರಿ ರಚ ನೆಗೂ ವಾಸ್ತವಿಕ ದುರಂತಕ್ಕೂ ಒಂದು ತಾಳಮೇಳ ಹಾಕು

ವುದು ಸರಿಯಲ್ಲವಾದರೂನನಗೇಕೊ ದುರಂತ ಐತಿಹಾಸಿಕ ಕಾದಂಬರಿ ಬರೆಯುವಾಗ ಈ ದುರಂತಗಳ ನೆನಪಾಗಿ ಮನಸ್ಸು ವಿಚಲವಾಗುತ್ತದೆ. ಆದರೂ ನಾನು 'ಮಲ್ಲಿಕಾರ್ಜುನ' ಬರೆದಾಗ ಅದನ್ನು ಜನತುಂಬ ಮೆಚ್ಚಿತು. ನನ್ನ 'ರಾಜಯೋಗಿ' ಬರೆದಾಗ ಅದನ್ನು ಜನ ತುಂಬ ಮೆಚ್ಚಿತು. ನನ್ನ ಕಾದಂಬರಿ ಮೈಸೂರು ವಿಶ್ವವಿದ್ಯಾಲಯದ ಪಿ. ಯು. ಸಿ. ಗೆ ಪಠ್ಯಪುಸ್ತಕವಾಗಿದೆ. ವಿಜಯನಗರಕ್ಕೆ ಸಂಬಂಧಿಸಿ ೨೪ ಕಾದಂಬರಿಗಳನ್ನು ಬರೆಯಬೇಕೆಂಬ ಆಸೆ ನನ್ನದು. ಅದಕ್ಕೆ ಎಲ್ಲ ಆಂತರಿಕ ಸಿದ್ಧತೆ ನಡೆಸಿದ್ದೇನೆ. ಎಲ್ಲ ಸಂಶೋಧನಾತ್ಮಕ ಅಭ್ಯಾಸ ಮಾಡಿದ್ದೇನೆ. ಹೆಚ್ಚಾಗಿ ವಿಜಯನಗರದ ಇತಿಹಾಸ ದುರಂತಮಯ ಚಿತ್ರಣ. ಅದನ್ನು ಇನ್ನಾದರೂ ಬರೆಯುವ ಸಂಕಲ್ಪವಿದೆ, ಅವಕ್ಕಾಗಿ ಪ್ರಯತ್ನಿಸುತ್ತಲೂ ಇದ್ದೇನೆ...

"ಈಗ ಬರುತ್ತಿರುವ ವಿಪುಲ ಐತಿಹಾಸಿಕ ಕಾದಂಬರಿಗಳ ಬಗ್ಗೆ ನೀವು ಏನು ಹೇಳುತ್ತೀರಿ ?

"ನೋಡಿ ಇತರ ಕಾದಂಬರಿಗಳಂತೆ ಐತಿಹಾಸಿಕ ಕಾದಂಬರಿ ಬರೆಯುವುದು ಸುಲಭವಲ್ಲ. ಆದರೆ ಈಗ ಅನೇಕ ಲೇಖಕರು ವಸ್ತುವನ್ನೇ ಪ್ರಾಧಾನ್ಯವಾಗಿಟ್ಟುಕೊಂಡು ಕಾದಂಬರಿ ರಚಿಸಿ ಮುಗಿಸುತ್ತಾರೆ. ಅವರು ಆಗಿನ ಕಾಲದ ನಡೆ-ನುಡಿ ನಾಗರಿಕತೆಗಳ ಅಭ್ಯಾಸ, ಸಂಶೋಧನೆ ಬಗ್ಗೆ ಅಷ್ಟಾಗಿ ಗಮನ, ಮನಸ್ಸು ಕೊಡುವದಿಲ್ಲ. ಕಥೆ ಹಳೆಯದಾಗಿ ವೇಷಭೂಷಣ, ಸಂಸ್ಕೃತಿ ನಡವಳಿಕೆ ಈಗಿನವರೆಗೆ ಹೋಲುವಂತೆ ಚಿತ್ರಿಸಿದ ಅನೇಕ ಅಭಾಸ ಕಾದಂಬರಿಗಳನ್ನು ನಾವೀಗ ಓದಬಹುದು".

ಐತಿಹಾಸಿಕ ಕಾದಂಬರಿಗಳನ್ನು ಬರೆಯುವ ಪೂರ್ವದಲ್ಲಿ ತಾವು ಮಾಡಿಕೊಂಡ ಸಿದ್ಧತೆಗಳನ್ನು ವಿವರಿಸುತ್ತ ಅವರು, "ವಿಜಯನಗರದ ಕಾಲದ ರಾಜರ, ಪ್ರಜೆಗಳ ನಿತ್ಯಜೀವನ, ವೇಶಭೂಷ, ಮಾತಿನ ರೀತಿ, ರಾಜನೀತಿಯ ನಡೆಗಳನ್ನು ಅರಿತುಕೊಳ್ಳಲು ಅನೇಕ ಸಮಕಾಲಿನ ಕಾವ್ಯಗಳನ್ನು ಓದಿಕೊಂಡೆ, ಅವರ ಚದುರಂಗ ಬಲಗಳ ವಿಚಾರಗಳನ್ನು ತಿಳಿಯುವದಕ್ಕಾಗಿ ಅಶ್ವಗಜ ಶಾಸ್ತ್ರಾದಿಗಳಿಂದ ವಿಷಯಗಳಿಂದ ತುಂಬಿದ 'ಮಾನಸೋಲ್ಲಾಸ' ಗ್ರಂಥವನ್ನು ಜೀರ್ಣಿಸಿಕೊಳ್ಳಬೇಕಾಯಿತು. ಈ ಐತಿಹಾಸಿಕ ಕಾದಂಬರಿಗಳು ಇದರಿಂದ ಒಂದು 'ಅಧಿಕೃತ' ಸ್ವರೂಪವನ್ನು ಪಡೆದಿವೆ' ಎಂದರು.

"ಚಿಕ್ಕ ಕಥೆಗಳನ್ನು ಬರೆಯಲು ನೀವು ಯಾವಾಗ ಆರಂಭಿಸಿದಿರಿ ?" ಎಂದು ಕೇಳಿದೆ.

"ನನ್ನ ೨೧ ನೇ ವಯಸ್ಸಿನಲ್ಲಿ 'ಮಾತೃಭೂಮಿ'ಯ ಸಂಪಾದಕನಾಗಿದ್ದಾಗ, ಹೆಸರು 'ನನ್ನ ಗೆಳೆಯ' ಅದಕ್ಕೆ ಪತ್ರಿಕೆಗಳಲ್ಲಿ ಬಂದ ಒಂದು ಸುದ್ದಿ ಪ್ರೇರಕವಾಗಿತ್ತು. ವರದಕ್ಷಿಣೆಯ ದುರಂತವನ್ನು ಕುರಿತ 'ಮಾತು ಮನೆ ಕೊಂಡಿತು' ಬಹುಶಃ ನನ್ನ ಎರಡನೇ ಕಥೆ. ಆದರೆ ಇವುಗಳನ್ನು ಅಪಕ್ವವೆಂದು ನನ್ನ ಕಥಾ ಸಂಕಲನಗಳಲ್ಲಿ ಸೇರಿಸಿಲ್ಲ" ಎಂದರು.

"ನಿಮಗೆ ಕಥೆ ಬರೆಯುವುದಕ್ಕೆ ಸ್ಫೂರ್ತಿಯಿತ್ತವರು ಯಾರು ?" ಎಂಬ ಪ್ರಶ್ನೆಗೆ, "ಮಾಸ್ತಿಯವರ ಚಿಕ್ಕ ಕಥೆಗಳು" ಎಂದು ನೇರವಾದ ಉತ್ತರ ಬಂತು. "ಮಧುರವಾಣಿ"ಯಲ್ಲಿ ಅವುಗಳನ್ನು ಓದುತ್ತಿದ್ದೆ. ಮಾಸ್ತಿಯವರೂ ಎ. ಆರ್. ಕೃಷ್ಣಶಾಸ್ತ್ರಿಗಳೂ (ಶ್ರೀಪತಿ) ನನ್ನ ಆಗಿನ ಮೆಚ್ಚಿನ ಕಥೆಗಾರರು.''

ಸಣ್ಣ ಕಥೆಗಳ ತಂತ್ರದ ಬಗ್ಗೆ ಅವರ ಅಭಿಪ್ರಾಯ ಕೇಳಿದೆ. ಅವರು ಹುಬ್ಬೇರಿಸಿ, 'ತಂತ್ರಕ್ಕಾಗಿ ಕಥೆ ಇದೆ ಎಂದು ನಾನು ನಂಬಿರುವುದಿಲ್ಲ. ಕಥೆಗಾಗಿ ತಂತ್ರ ವಾಹನದಂತೆ ವರ್ತಿಸುತ್ತದೆ. ಕಥಾವಸ್ತುಗಳು ನಿರೀಕ್ಷಣ ಶಕ್ತಿಯೊಂದಿದ್ದರೆ ವಿಪುಲವಾಗಿ ದೊರೆಯುತ್ತವೆ. ಆದರೆ ವಸ್ತುವಿನ ಹಿಂದಿರುವ ಮಾನವ ಆತ್ಮಗಳ ಮಿಡುಕನ್ನು ಕಂಡು ಸೂತ್ರಬದ್ಧವಾಗಿ ಅಭಿವ್ಯಂಜನ ಮಾಡುವ ಚೈತನ್ಯವೇ ಪ್ರತಿಭೆ. ಅದಕ್ಕೆ ಅನುಭವದ ಬಲ ಬೇಕು. ಇವೆರಡಿಲ್ಲದ ತಂತ್ರ ಎಷ್ಟೇ ಅದ್ಭುತವಾಗಿದ್ದರೂ ಪ್ರಯೋಜನವಿಲ್ಲ" ಎಂದರು.

ಗದ್ಯದಲ್ಲಿ ಆನಂದಕಂದರು ತುಂಬ ಪರಿಣತರಾಗಿದ್ದರೂ ತಮ್ಮನ್ನು ಅವರು ಪ್ರಾಥವಿಜಕವಾಗಿ ಕವಿಯೆಂದೇ ಗುರುತಿಸಿಕೊಳ್ಳುತ್ತಾರೆ. "ಏಳನೇ ವಯಸ್ಸಿ

ನಲ್ಲೇ ನನ್ನ ಮೊದಲ ಪದ್ಯ ಬರೆದೆ ಅಥವಾ ಹಾಡಿದೆ. ವಾಸ್ತವಿಕವಾಗಿ ನಾನು ಗದ್ಯ ಬರೆಯಲು ಪ್ರಾರಂಭಿಸಿದ್ದು ಸ್ವರಾಜ್ಯ ಆಶ್ರಮದಲ್ಲಿ (೧೯೨೧) 'ಮಾತೃಭೂಮಿ'ಯ ಸಂಪಾದಕನಾದಾಗಲೇ. ಅದರ ಹಿಂದಿನ ಸಂಪಾದಕರ ಪುಣ್ಯಸ್ಮರಣೆಯ ಚಿಕ್ಕ ಲೇಖನವನ್ನು ಮೂರುಸಲ ಬರೆದೂ ಹರಿದೂ ಬರೆಯಬೇಕಾಯಿತು." ಪದ್ಯ ರಚನೆಯ ಪ್ರಥಮ ಘಟ್ಟದಲ್ಲಿ ದಾಸರ ಪದಗಳು, ಮೇಳದ ಪದಗಳ ಧಾಟಿಯಲ್ಲಿ ಅವರ ಪ್ರಯೋಗಗಳು ನಡೆದವು. ಆಗ ಅವರು ಬರೆದ ಕೆಲ ರಾಷ್ಟ್ರೀಯ ಹಾಡುಗಳನ್ನು ಈಗಲೂ ಜನರು ಬೆಳಗಾವಿ ಕಡೆ ಹಾಡುತ್ತಾರೆ. ಹೊಸ ಲಯಗಳ, ಛಂದಸ್ಸುಗಳ ವಿಷಯದಲ್ಲಿ ಮೊದಲಿನಿಂದಲೂ ಕುತೂಹಲಿಗಳಾದ ಅವರು ಹೊಸ ಹೊಸ ಛಂದೋಬಂಧಗಳನ್ನು ಸೃಜಿಸಿಕೊಂಡರು. ಆಮೇಲೆ ಅವರು ಬರೆದ ಭಾವಗೀತೆಗಳು ಹಲವು ಸಂಕಲನದಲ್ಲಿ ಪ್ರಕಟವಾಗಿವೆ.

ಕನ್ನಡದ ಜಾಯಮಾನದ ತಿರುಳರಿತ ಶೈಲಿ 'ಆನಂದಕಂದ'ರದು. ನಿಮ್ಮ ಶೈಲಿಯನ್ನು ಪ್ರಭಾವಿತಗೊಳಿಸಿದ ಕವಿ ಯಾರು ಎಂದು ಕೇಳಿದರೆ ಅವರೆನ್ನುತ್ತಾರೆ: 'ಕುಮಾರವ್ಯಾಸ, ಲಕ್ಷ್ಮೀಶ. ಮೊಟ್ಟಮೊದಲು ಕುಮಾರವ್ಯಾಸನನ್ನು ಓದುವ ಭಾಗ್ಯ ದೊರೆತಾಗ ನಾನೊಂದು ಅಸಾಧಾರಣವಾದ ಲೋಕದಲ್ಲಿ ಪ್ರವೇಶಿಸಿದ ಅನುಭವ ನನಗಾಯಿತು. ಅವನ ಮಂತ್ರಶಕ್ತಿಯ ಪ್ರಭಾವ ನನ್ನನ್ನು ಇಂದಿಗೂ ಬಿಟ್ಟಿಲ್ಲ."

ಪ್ರಭಾವಗಳ ವಿಷಯ ಮಾತನಾಡುತ್ತ ಅನ್ಯ ಭಾಷೆಗಳ ಪರಿಚಯದ ವಿಚಾರ ಕೇಳಿದೆ. ಆನಂದಕಂದರು ಬಂಗಾಲಿಯ ಪರಿಚಯವನ್ನು ಸಾಕಷ್ಟು ಹೊಂದಿದ್ದಾರೆ. ಬೆಳಗಾವಿಯ ಸ್ವರಾಜ್ಯ ಆಶ್ರಮದಲ್ಲಿದ್ದಾಗ ಮರಾಠಿ ಪರಿಚಯವಾಯಿತು. ತತ್ಕಾಲೀನ ಪ್ರಮುಖ ಸಾಹಿತಿಗಳಾದ ಆಪಟೆ, ಗಡಕರಿ, ಟಿಳಕ ಮೊದಲಾದವರ ಕಾದಂಬರಿ, ನಾಟಕ, ಕಾವ್ಯಗಳ ಓದೂ ಆಯಿತು, "ಆದರೆ ಪರಭಾಷಾ ಸಾಹಿತ್ಯದಿಂದ ಹೆಚ್ಚು ಪ್ರಭಾವಿತನಾಗುವುದಕ್ಕೆ ನಾನು ನನಗೆ ಅವಕಾಶ ಕೊಟ್ಟುಕೊಳ್ಳಲಿಲ್ಲ. ಕರ್ನಾಟಕದ ಜನಜೀವನ ಕಾವ್ಯ ಪರಂಪರೆಗಳಲ್ಲಿ ಆಗಲೇ ನನ್ನ ಕಾಲುಗಳು ಸ್ಥಿರವಾಗಿ ನಿಂತಿದ್ದವು".

ಆಮೇಲೆ ಮಾತು ಇಂಗ್ಲೀಷ ಕಡೆ ತಿರುಗಿತು. ಕನ್ನಡದ ಹೆಚ್ಚಿನ ಸಾಹಿತಿಗಳ ಹಾಗೆ ಬೆಟಗೇರಿಯವರಿಗೆ ಬಲವಾದ ಇಂಗ್ಲೀಷ್ ತರಬೇತಿ ದೊರೆಯಲಿಲ್ಲ. ಈ ವಿಷಯವನ್ನು ನಾನು ಅಳುಕುತ್ತಲೇ ಪ್ರಸ್ತಾಪಿಸಿದೆ. ಬೆಟಗೇರಿಯವರು ಮಾತ್ರ ಏನೂ ವ್ಯಥಿತರಾಗಲಿಲ್ಲ, "ಇದರಲ್ಲಿ ನೊಂದುಕೊಳ್ಳುವ ಮಾತೇ ಇಲ್ಲ. ಇಂಗ್ಲೀಷಿನ ಗಾಢ ಪರಿಚಯವಿಲ್ಲದ್ದು ಕೆಲ ಮಟ್ಟಿಗೆ ಕೊರತೆ ಎನಿಸುವುದು ನಿಜ. ಆದರೆ ಇದರಲ್ಲಿ ಸಾಹಿತ್ಯ ಮೂಲವಾದದ್ದಕ್ಕಿಂತಲೂ ವ್ಯವಹಾರ ಮೂಲವಾದದ್ದು ಹೆಚ್ಚು. ನನ್ನ ತಮ್ಮ ಎಂ. ಎ. ಗೆ ಓದುತ್ತಿದ್ದಾಗ ಅವನಿಂದಲೂ ಬೇರೆ ವೇಳೆ ಇತರರಿಂದಲೂ ಇಂಗ್ಲೀಷಿನ ಹೆಸರಾಂತ ಕೃತಿಗಳನ್ನು ಓದಿಸಿ ತಿಳಿದುಕೊಂಡಿದ್ದೆ. ತಮ್ಮನೊಡನೆ ಚರ್ಚಿಸುವಾಗ ಇಂಗ್ಲೀಷ ಓದದ ನಾನು ಪಾಶ್ಚಾತ್ಯ ಸಾಹಿತ್ಯ ಚಿಂತಕರ ವಿಮರ್ಶ ಸಿದ್ಧಾಂತಗಳನ್ನು ಹೋಲುವ ಪ್ರತಿಪಾದನೆಗಳನ್ನು ಮಾಡುವುದನ್ನು ನೋಡಿ ಆತ ಆಶ್ಚರ್ಯಪಡುತ್ತಿದ್ದ. ಬೆಂಗಳೂರಲ್ಲಿ ದೇವುಡು ಅವರೊಡನೆ ಕೆಲಕಾಲ ಇದ್ದಾಗ ಅವರು ಇಂಗ್ಲೀಷ ಓದಿದ ತಮ್ಮ ಸಿದ್ಧಾಂತಗಳನ್ನು ಭಾರತೀಯ ಪ್ರಾಚೀನ ಸಿದ್ಧಾಂತಗಳ ಕಡೆಗೆ ವಾಲುತ್ತಿರುವಾಗ ನನ್ನ ವಿಚಾರಗಳು ಪಾಶ್ಚಾತ್ಯರ ಅಭಿಪ್ರಾಯಗಳ ಸಾಮ್ಯ ಹೊಂದಿರುವುದು ಹೇಗೆಂದು ನನ್ನನ್ನು ಕೇಳುತ್ತಿದ್ದರು. ಸಾರಾಂಶವಿಷ್ಟೇ : ಸ್ವತಂತ್ರವಾಗಿ ವಿಚಾರಿಸುವವರಿಗೆ ಪರಭಾಷಾಜ್ಞಾನದ ಕೊರತೆ ಹೆಚ್ಚು ಅನಿಸಬಾರದು. ಹೆಚ್ಚು ಇಂಗ್ಲೀಷ ಓದಿದ್ದರೆ ನನ್ನ ಬರವಣಿಗೆಯಲ್ಲಿ ಮೂಲಭೂತ ಅಂತರವಾಗುತ್ತಿತ್ತೆಂದು ನಾನೆಣಿಸುವುದಿಲ್ಲ"

"ಆದರೆ ನಿಮ್ಮ ಪ್ರತಿಭೆಗೆ ದೊರಕಬಹುದಾಗಿದ್ದ ಮನ್ನಣೆ ಈ ಕಾರಣದಿಂದ ನಿಮಗೆ ತಕ್ಕಷ್ಟು ತಕ್ಕ ಕಾಲದಲ್ಲಿ ದೊರಕಲಿಲ್ಲವೆಂದು ನಿಮಗೆ ತೋರುವುದಿಲ್ಲವೆ?" ಎಂದೆ.

"ಹಾಗೆ, ಭಾವಿಸುವುದಕ್ಕೆ ನನಗೆ ಇಷ್ಟವಿಲ್ಲ. ಆದರೂ ನಿಮ್ಮ ತರ್ಕದಲ್ಲಿ ಸಿಜಾಂಶವಿರವಿರಬಹುದೆಂಬ

ಭಾವನೆ ನನಗೂ ಬಂದದ್ದುಂಟು." ಇಂಗ್ಲೀಷರೊಡನೆ ನಮ್ಮ ಪ್ರಭೃತಿಗಳ ಸಂಬಂಧ, ಒಂದು ತರಹದ ದಾಸ್ಯ-ದ್ವೇಷ ಸಂಬಂಧವೆಂಬುದು ಯಾರಿಗೆ ಗೊತ್ತಿಲ್ಲ? ಆನಂದ ಕಂದರ ಗ್ರಂಥಗಳಿಗೆ ಮುಂಬಯಿಯ ರಾಜ್ಯ ಸರಕಾರದ ಬಹುಮಾನಗಳು ಬಂದಿವೆ. ಅವು ವಿಶ್ವವಿದ್ಯಾಲಯ ಪಠ್ಯ ಪುಸ್ತಕಗಳೂ ಆಗಿವೆ. ಸಂಸ್ಕೃತಿ ಸಂಶೋಧನೆಗಳಲ್ಲಿ ಅವರ ಕೊಡುಗೆಯನ್ನು ಗಮನಿಸಿ ಅವರಿಗೆ ಕೇಂದ್ರ ಸರಕಾರದ ವೇತನವೂ ಸಲ್ಲುತ್ತಿದೆ. ಕರ್ನಾಟಕ ವಿಶ್ವ ವಿದ್ಯಾಲಯದ ಬ್ರಾಹ್ಮಣ ಸಾಹಿತ್ಯ ಸಂಶೋಧನ ವಿಭಾಗ ದಲ್ಲಿ ಅವರ ಸೇವೆಯನ್ನು ಸ್ವೀಕರಿಸಲಾಗಿದೆ. ನಾಡು ಆಗಾಗ್ಗ ಅವರನ್ನು ವಿಧ ವಿಧವಾಗಿ ಆದರಿಸಿದೆ. ಆದರೂ ಸಾಹಿತ್ಯ ಸಮ್ಮೇಳನಾಧ್ಯಕ್ಷತೆ ಈ ಹಿರಿಯ ವಿದ್ವತ್ ಸಾಹಿತಿಗೆ ಇನ್ನೂ ದೊರೆಯದ್ದು ಆಶ್ಚರ್ಯವೇ.

ಆ ಕುರಿತು ಅವರನ್ನು ಕೇಳಿದರೆ ಯಾವ ಉದ್ವೇಗವೂ ಇಲ್ಲದೇ ಹೇಳುತ್ತಾರೆ : 'ಇಂಗ್ಲೀಷ ಪ್ರಶ್ನೆಗೂ ಇದಕ್ಕೂ ಸಂಬಂಧವುಂಟೋ ಇಲ್ಲವೋ, ಆದರೆ ಇನ್ನೂ ಒಂದು ಬಲವಾದ ಕಾರಣವಿದೆ. ನಾನೊಂದು ತರಹದ ಬಡ ಸಂನ್ಯಾಸಿ. ನನಗೆ ಮಠವಿಲ್ಲ. ಶಿಕ್ಷಣ ವೃತ್ತಿಯಲ್ಲಿಲ್ಲದ್ದರಿಂದ ಪ್ರಬಲವಾದ ಶಿಷ್ಯವರ್ಗವಿಲ್ಲ. ಅಂಥದನ್ನು ಕಟ್ಟುವ ಜಾಯಮಾನವೂ ನನ್ನದಲ್ಲ. ಸಮ್ಮೇಲನಾಧ್ಯಕ್ಷರ ಆಯ್ಕೆಯಲ್ಲಿ ಇಂದಿನ ಜೀವನದ ಎಲ್ಲ ರಂಗ ಗಳಲ್ಲಿ ಆಗುವ ಹಾಗೆ ಬಗೆಬಗೆಯ ಒತ್ತಡಗಳು ಕೆಲಸ ಮಾಡುತ್ತವೆ. ಇಂಥ ವಿಷಯಗಳನ್ನು ನಿರ್ಣಯಿಸುವವರು ಈ ಒತ್ತಡಗಳಿಗೊಳಪಟ್ಟು ಕೆಲಸ ಮಾಡಬೇಕಾಗುತ್ತದೆ. ಮಾನವಸಹಜವಾದ ಆಕಾಂಕ್ಷೆಗಳು ನನಗಿಲ್ಲ ವೆಂದು ಹೇಳಲಾರೆನಾದರೂ ಇಂಥ ಸಂಗತಿಗಳನ್ನೆಲ್ಲ ಲಘುವಾಗಿ ಕಾಣಲು ನಾನೀಗ ಪಳಗಿದ್ದೇನೆ."

ಆನಂದಕಂದರು ೪೦ ಕ್ಕೂ ಮಿಕ್ಕಿದ ಗ್ರಂಥಗಳನ್ನು ಬರೆದಿದ್ದಾರೆ; ಕವಿತೆ, ಕಥೆ, ಕಾದಂಬರಿ, ಸಾಹಿತ್ಯ, ಸಂಸ್ಕೃತಿಶೋಧನೆ, ಪ್ರಬಂಧ, ಗೀತನಾಟಕ ಮುಂತಾದ ಎಲ್ಲ ಕ್ಷೇತ್ರಗಳಲ್ಲಿ ಅವರು ಶ್ರಮಿಸಿದ್ದಾರೆ. ಅವರ ಹೆಚ್ಚಿನ ಗ್ರಂಥಗಳು ಏನಿಲ್ಲೆಂದರೂ ಎರಡು ಮೂರು ಆವೃತ್ತಿ ಗಳನ್ನು ಕಂಡಿವೆ. ಸಾಹಿತ್ಯ ಮತ್ತು ಧನಾರ್ಜನೆಯ ವಿಷಯ ಮಾತಾಡುವಾಗ ಅವರು ನಮ್ಮ ನಾಡಿನಲ್ಲಿ ಅಪರೂಪವಲ್ಲದ ತಮ್ಮ ಅನುಭವಗಳನ್ನು ಹೇಳಿದರು "ಅಶಾಂತಿ ಪರ್ವ'ದ ಸರ್ವ ಹಕ್ಕುಗಳನ್ನು ಪುಟಕ್ಕೊಂದು ರೂಪಾಯಿಯಂತೆ ಕೊಡಬೇಕಾಯಿತು. ಅದು ಹಲವು ಆವೃತ್ತಿಗಳನ್ನು ಕಂಡರೂ ಲೇಖಕರಿಗೆ ಆಮೇಲೆ ಏನೂ ಸಿಗಲಿಲ್ಲ. 'ಸಂಸಾರ ಚಿತ್ರ' ಕಥಾಸಂಗ್ರಹದ ಕಥೆಯೂ ಅದೇ ಆಯಿತು. ಮುಂದೆ ಕೆಲ ಪುಸ್ತಕಗಳನ್ನು ತಕ್ಕ ಮಟ್ಟಿಗೆ ಪ್ರಾಪ್ತಿಯನ್ನು ತಂದವು. 'ಜನಪದ ಜೀವನ' ಕಥಾ ಸಂಕಲನದಿಂದ ಅವರಿಗೆ ಎಲ್ಲಕ್ಕೂ ಹೆಚ್ಚು ಪ್ರಯೋಜನವಾದದ್ದು. ಕಥೆಗಳು ರಸಿಕ ಮಾನ್ಯವಾದವುಗಳೇ. ಆದರೂ ಧನಪ್ರಾಪ್ತಿಗೆ ಕಾರಣ ಅದು ಎಸ್. ಎಸ್. ಎಲ್. ಸಿ. ಗೆ ಪಠ್ಯವಾದದ್ದರಿಂದ. ಇದು ಅವರ ಮಗಳ ಮದುವೆಯ ಭಾರವನ್ನು ಸುಲಭವಾಗಿ ಇಳಿಸಿತು.

"ವಿಮರ್ಶಕರ ಹೇಳಿಕೆ, ಜನರ ಸ್ವಾಗತ ಹೇಗಿದ್ದರೂ ನಿಮ್ಮ ಅತ್ಯುತ್ತಮ ಕೃತಿಗಳು ಯಾವುದೆಂದು ನಿಮ್ಮೆಣಿಕೆ ?" ಎಂದು ಕೇಳಿದೆ. "ನನ್ನ ಕವಿತೆಗಳಲ್ಲಿ ಹಲವು ಚಿರಕಾಲ ಬಾಳುವವೆಂದು ನಾನೆಣಿಸಿದ್ದೇನೆ, ಸಣ್ಣ ಕಥೆಗಳಲ್ಲಿ ಸುಮಾರು ಇಪ್ಪತ್ತು ನನಗೇ ತುಂಬಾ ತೃಪ್ತಿ ತಂದಿವೆ. ಕಾದಂಬರಿಗಳಲ್ಲಿ 'ಅಶಾಂತಿಪರ್ವ', 'ಮಲ್ಲಿಕಾರ್ಜುನ; 'ಮಗಳ ಮದುವೆ' ಇವುಗಳನ್ನು ಹೆಸರಿಸಬಲ್ಲೆ. 'ಮಾತಾಡುವ ಕಲ್ಲು' ಸಂಗ್ರಹವನ್ನೂ ನಾನು ನನ್ನ ಶ್ರೇಷ್ಠ ಕೃತಿಗಳಲ್ಲಿ ಎಣಿಸುತ್ತೇನೆ" ಎಂದರು.

"ನಿಮ್ಮ ಕೃತಿ ರಚನೆಯ ಕಾಲಕ್ಕೆ ನಿಮ್ಮ ಮನೋಭೂಮಿಕೆ ಹೇಗಿರುತ್ತದೆ ? ನೀವು ಬಹಳ ಉತ್ತೇಜಿತ, ಉದ್ದೀಪ್ತ ಸ್ಥಿತಿಯಲ್ಲಿರುತ್ತೀರಾ? ಯಾವುದೋ ಅತೀಂದ್ರಿಯಾವಸ್ಥೆಯಲ್ಲಿರುವಂತೆ ಭಾಸವಾಗುವುದುಂಟೆ? ಕಾದಂಬರೀ ರಚನೆಯ ಕಾಲದಲ್ಲಿ ಇಡೀ ಕಥೆಯ ಹೊಳಹು ಪೂರ್ವ ನಿರ್ಧಾರಿತವಾಗಿರುತ್ತದೆಯೋ?" ಎಂಬುದಕ್ಕೆ ಅವರು ಹೇಳಿದ್ದಿದು: "ನಾನು ಅಂತರಂಗದಲ್ಲಿ ಭಕ್ತ, ಕವಿ, ಆದರೂ ಬರವಣಿಗೆಯ ಕಾಲದಲ್ಲಿ ಒಂದು ಉದ್ದೀಪ್ತ ಸ್ಥಿತಿಯಲ್ಲಿರುವೆನೆನಿಸಿದರೂ ವಿಮರ್ಶ ಬುದ್ಧಿಯನ್ನು

ಕಳೆದುಕೊಳ್ಳುವಷ್ಟು ಅದರ ಓಘವಿರುವುದಕ್ಕೆ ನಾನು ಎಡೆ ಕೊಡುವುದಿಲ್ಲ. ನನ್ನ ಉತ್ತಮ ಕವಿತೆಗಳು ಹುಟ್ಟುತ್ತಿರುದ್ದಾಗ ಒಂದು ತರಹದ ಅತೀಂದ್ರಿಯ ಭಾವವನ್ನು ಅನುಭವಿಸಿದ್ದುಂಟು. ಕಥೆ ಕಾದಂಬರಿಗಳ ನಿರ್ಮಾಣದಲ್ಲಿ ನಾನು ತಕ್ಕಷ್ಟು ಪೂರ್ವಸಿದ್ಧತೆ ಮಾಡಿಕೊಂಡಿರುತ್ತೇನೆ. ಮುಖ್ಯ ಪಾತ್ರಗಳು, ಆರಂಭ, ಮುಕ್ತಾಯ ಇವು ಮನಸ್ಸಿನಲ್ಲಿ ಮೊದಲೇ ನಿರ್ಧಾರಿತವಾಗಿರುತ್ತವೆ. ಬರೆಯಲಾರಂಭಿಸಿದ ಮೇಲೆ ಆ ಮೊದಲಿಂದ ಆ ತುದಿಗೆ ತಲುಪುವ ದಾರಿ ಮಾತ್ರ ತಾನೆ ತೆರೆಯುತ್ತ ಹೋಗುತ್ತದೆ. ಬರೆದು ಮುಗಿಸಿದ ಮೇಲೆ ಪುನರವಲೋಕನ ಮಾಡಿದಾಗ ಇದನ್ನು ನಾನೇ ಬರೆದೆನೇ ಎನ್ನಿಸಿಬಿಟ್ಟದ್ದುಂಟು. ಹಾಗಾದಾಗ ನನಗೆ ಸಾರ್ಥಕತೆಯ ಅನುಭವವಾಗುತ್ತದೆ. ಈ ಅನುಭವವನ್ನೇ ನಾನು ನನ್ನ ಕೃತಿಯ ನಿಜವಾದ ಪ್ರತಿಫಲವಾಗಿ ಭಾವಿಸುತ್ತೇನೆ. ಉಳಿದದ್ದೆಲ್ಲ ಲೌಕಿಕ."

ಇದೇ ತಿಂಗಳಲ್ಲಿ (ಎಪ್ರಿಲ್) ೬೯ ದಾಟಿ ೭೦ರಲ್ಲಿ ಅಡಿಯಿಡುತ್ತಿರುವ ಆನಂದಕಂದರ ಪರಿಚಯ ಬೆಳೆದಷ್ಟೂ ಅವರ ಮೇಲೆ ಗೌರವ ಬೆಳೆಯುತ್ತದೆ, ಅವರ ಪಾಂಡಿತ್ಯದ ಆಳ ತಿಳಿಯುತ್ತದೆ. ಕನ್ನಡ ಭಾಷೆಯ ತಿರುಳನ್ನು ಅರಿತವರು ಅವರು. ಕನ್ನಡ ಸಾಹಿತ್ಯ, ಸಂಸ್ಕೃತಿಗಳ ಬಗ್ಗೆ ತಮ್ಮಿಂದ ಇನ್ನೂ ಹೆಚ್ಚು ಕೆಲಸವಾಗಬೇಕಾಗಿತ್ತೆಂದು ಭಾವಿಸುತ್ತಾರೆ. 'ಗಾಂಧೀ ಭಾರತ' ವೆಂಬ ಮಹಾಕಾವ್ಯ ರಚನೆಯ ಸಂಕಲ್ಪವನ್ನವರು ಮಾಡಿದ್ದಾರೆ. ಜೀವಮಾನದಲ್ಲಿ ಅವರು ಅವಿರತವಾಗಿ ಗೌರವಿಸುವ ವ್ಯಕ್ತಿಗಳು ಇಬ್ಬರು ; ಒಬ್ಬರು ಅವರ ತಾಯಿ; ಸ್ವತಃ ನಿರಕ್ಷರೆಯಾಗಿದ್ದರೂ ಕವಿ ಚೇತನದೊಡನೆ ಹುಟ್ಟಿಬಂದಿದ್ದ ಅವರು ದಾಸರ ಪದಗಳಿಂದಾರಂಭಿಸಿ ರಾಮಾಯಣ, ಮಹಾಭಾರತಗಳು ಕಥೆ, ಕಾದಂಬರಿಗಳವರೆಗೆ ಉತ್ತಮ ಸಾಹಿತ್ಯವನ್ನು ಮಗನಿಂದ ಓದಿಸಿ ಹುಡುಗತನದಿಂದಲೇ ರಸಪ್ರಜ್ಞೆಯನ್ನು ನೆಟ್ಟು ನೀರುಣಿಸಿದರು. ಇನ್ನೊಬ್ಬರು ಮಹಾತ್ಮಾಗಾಂಧೀ ; "ನನ್ನಲ್ಲಿ ಸ್ವಲ್ಪವಾದರೂ ಮಾನವತೆಮೂರ್ತಿವೆತ್ತಿದ್ದರೆ ಅದರರೂವಾರಿಗಳು ಗಾಂಧೀ ಗುರುಗಳೇ,' ಎಂದು ಶರ್ಮರು ಹೇಳುತ್ತಾರೆ.

ಕನ್ನಡ ದಾಸರೂ ಮರಾಠಿ ಸಂತರೂ ಕೃಷ್ಣನನ್ನು 'ಆನಂದಕಂದ' ಎಂದು ಕರೆದರು. ಬೆಟಗೇರಿ ಕೃಷ್ಣ ಶರ್ಮರು ಅದನ್ನು ತಮ್ಮ ಕಾವ್ಯನಾಮವಾಗಿ ಮಾಡಿಕೊಂಡರು. ಪ್ರಾಪಂಚಿಕ ದೃಷ್ಟಿಯಿಂದ ಅವರಿಗೆ ಆನಂದವನ್ನು ಅಳೆಯುವುದರಲ್ಲಿ ಭಗವಂತ ಜಿಪುಣತನವನ್ನೇ ಮಾಡಿದ್ದಾನೆ. ಆದರೆ ಲೌಕಿಕ ಕ್ಲೇಶದ ಔಷಧವನ್ನುಣಿಸದೆ ಪಾರಮಾರ್ಥಿಕದ ತುತ್ತನ್ನು ಆತ ಯಾರಿಗೆ ಕೊಟ್ಟಿದ್ದಾನೆ?

● ●

ಗೋವರ್ಧನಾಚಾರ್ಯ ಗಲಗಲಿ
M.A.B.T.

# ಕವಿ ಮನೀಷೀ

ಪರಮೇಶ್ವರನ ಅರ್ಧಾಂಗಿ ಪಾರ್ವತಿ. ಅವಳು ಪರ್ವತರಾಜ ಹಿಮಾಲಯನ ಪುತ್ರಿ. ತಂದೆಗೆ ಮಹತ್ವ ಬಂದುದು ಮಗಳಿಂದಲೇ. ಅದು ಹೇಗೆ ಎಂಬುದನ್ನು ಕಾಲಿದಾಸ ಹೃದಯಂಗಮವಾಗಿ ಬಣ್ಣಿಸಿದ್ದಾನೆ :

"ಪ್ರಭಾಮಹತ್ಯಾ ಶಿಖಯೇವ ದೀಪಃ, ತ್ರಿಮಾರ್ಗ ಯೇವ ತ್ರಿದಿವಸ್ಯ ಮಾರ್ಗಃ ।

ಸಂಸ್ಕಾರವತ್ಯೇವ ಗಿರಾ ಮನೀಷೀ ತಯಾ ಸ ಪೂಜ್ಯಶ್ಚ ವಿಭೂಷಿತಶ್ಚ ॥

ಕಾಂತಿಯುಕ್ತವಾದ ಕುಡಿಯಿಂದ ದೀಪದಂತೆ, ಭಾಗೀರಥೀತಟವನ್ನೇ ಕಚ್ಚಿಕೊಂಡು ಹೋಗುವ ಆ ನದಿಯಿಂದ ಸ್ವರ್ಗವಮಾರ್ಗದಂತೆ, ಸಂಸ್ಕಾರಯುತವಾದ ಮಾತಿನಿಂದ ಮನೀಷೆಯಂತೆ ಆ ಪಿತನು ಪುತ್ರಿಯಿಂದ ಪೂಜ್ಯನೂ ವಿಭೂಷಿತನೂ ಆಗಿದ್ದನು." ಕನ್ನಡ ಸಾಹಿತ್ಯ ಸಹ್ಯಾದ್ರಿಯೂ ಇದರಂತೆ ಕವಿಭೂಷಣ ಬಿರುದಾಂಕಿತ ಶ್ರೀಕೃಷ್ಣಶರ್ಮರ ಕೊಡುಗೆಯಿಂದ ಮಾನ್ಯವೂ ಧನ್ಯವೂ ಆಗಿದೆ ಎಂಬುದರಲ್ಲಿ ಸಂಶಯವಿಲ್ಲ. ದೀಪದ ಶಿಖೆಯಂತೆ ಅದು ಪ್ರಕಾಶಪ್ರದ; ತಮೋನಾಶಕ; ಸ್ವರ್ಗಂಗೆಯಂತೆ ಉನ್ನತಿದರ್ಶಕ, ಮನೀಷಿಯ ಮಾತಿನಂತೆ ವಿವೇಕಯುತ ಔಚಿತ್ಯಪೂರ್ಣ, ರಸೋತ್ಕಟ.

ಆಡು ಮುಟ್ಟದ ಗಿಡಮೂಲಿಕೆಯಿಲ್ಲ ಎಂಬಂತೆ ಕೃಷ್ಣಶರ್ಮರ ಲೇಖನೀ ತಟ್ಟಿ ಅಲಂಕರಿಸದ ಸಾಹಿತ್ಯ ಶಾಖೆಯಿಲ್ಲ. ಕವಿತೆ, ಕತೆ, ಕಾದಂಬರಿ, ನಿಬಂಧ, ವಿಮರ್ಶೆ, ಪತ್ರಿಕಾಪ್ರಪಂಚ, ಸಂಶೋಧನೆ ಇತ್ಯಾದಿಗಳಲ್ಲಿ ಅವರ ಮೌಲಿಕ ಗ್ರಂಥಗಳು, ಬಿಡಿ ಲೇಖನಗಳು ರಸಿಕರ ಹೃದಯಗಳನ್ನು ಸೂರೆಗೊಂಡಿವೆ. ಆಧುನಿಕ ಕನ್ನಡ ಸಾಹಿತ್ಯ ಶಿಖರ ಶ್ರೇಣಿಯಲ್ಲಿ ಅವರ ಕೃತಿಸಮುಚ್ಚಯ ಗೌರೀಶಂಕರ ಎಂದು ನಾನು ಹೇಳಲಾರೆ. ಅದು ಅತಿಶಯೋಕ್ತಿಯಾದೀತು, ಹಿಂದಿನ ಆಸ್ಥಾನಕವಿತ್ವಕ್ಕೆ ಸರಿಸಮಾನವಾದುದು. ಇಂದಿನ ಪ್ರತಿವರ್ಷ ನಡೆಯುವ ಸಾಹಿತ್ಯಪರಿಷತ್ತಿನ ಅಧ್ಯಕ್ಷಪದವಿ, ಅದನ್ನಲಂಕರಿಸಿದ ಎಷ್ಟೋ ಮಹನೀಯರ ಕೃತಿಗಳಿಗಿಂತ ಇವರ ಕೊಡುಗೆ, ಮೊತ್ತ ಹಾಗೂ ಗುಣಮಟ್ಟದಲ್ಲಿ ಸಾವಿರಾರು ಅಡಿ ಎತ್ತರ ಎಂದು ಇಲ್ಲಿ ಹೇಳದೆ ಇರಲಾರೆ. ಅದು ಇವರಿಗೆ ಲಭ್ಯವಾಗದಿರುವುದು ಪರಿಷತ್ತಿನ ಹಾಗೂ ಸಾಹಿತಿಯ ದುರ್ದೈವ.

ಲೋಕಯಾತ್ರೆ ಎಂದಿನಿಂದಲೂ ಹೀಗೆಯೇ. ಜೀವಿಸಿದ್ದಾಗ ಅಲಕ್ಷಿತರೂ, ಮರಣಾನಂತರ ಸನ್ಮಾನಿತರೂ ಆದ ಕವಿಪುಂಗವರು ಪೂರ್ವದಲ್ಲಿಯೂ ಪಶ್ಚಿಮದಲ್ಲಿಯೂ ಹೇರಳ. "ಉತ್ಪತ್ಸ್ಯತೇಽಸ್ತಿ ಮಮ ಕೋಽಪಿ ಸಮಾನಧರ್ಮಾಃ ಕಾಲೋಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ". "ಸದ್ಯಕ್ಕೆ ನನ್ನ ಕೃತಿಗಳಿಗೆ ಮನ್ನಣೆ ದೊರೆಯದಿದ್ದರೇನಾಯಿತು? ನನ್ನ ಸಮಾನಧರ್ಮನಾದ ಸಹೃದಯರು ಮುಂದೆ ಹುಟ್ಟಬಹುದು. ಯಾಕೆಂದರೆ ಕಾಲಕ್ಕೆ ಮರ್ಯಾದೆ ಇಲ್ಲ, ಪೃಥ್ವಿಯೂ ವಿಪುಲವಾಗಿದೆ" ಎಂದು ಕ್ಷುಣ್ಣಮಾರ್ಗದಿಂದ ಭಿನ್ನ ಮಾರ್ಗಾವಲಂಬೀ, ಆದ್ದರಿಂದ ಅಲಕ್ಷಿತನಾಗಿ ಖಿನ್ನನಾದ ಭವಭೂತಿ ಆತ್ಮವಿಶ್ವಾಸದಿಂದ ಹೇಳಿಕೊಂಡಿದ್ದಾನೆ. ಇಂದು ಅವನ ಸ್ಥಾನ ಸಂಸ್ಕೃತದಲ್ಲಿ ಕಾಲಿದಾಸಾನಂತರು ಎರಡನೆ

ಯದು. ಅತ್ತ ಇಲೀಯಡ್ ಮತ್ತು ಒಡಿಸಿ ಎಂಬ ಪ್ರಸಿದ್ಧ ಪುರಾಣಗ್ರಂಥಗಳನ್ನು ರಚಿಸಿದ ಪುರಾತನ ಗ್ರೀಕ ಕವಿ ಹೋಮರನಿಗೆ ತಲೆಯ ಮೇಲೊಂದು ಚಪ್ಪರವಿರಲಿಲ್ಲ. ಅದೇ ಅವನ ಮರಣಾನಂತರ, ಏಳು ಪಟ್ಟಣಗಳು ಇವ ನಮ್ಮ ನಗರವಾಸಿ, ನಮ್ಮ ನಗರನಿವಾಸೀ ಎಂದು ವಾದವಿವಾದದಲ್ಲಿ ತೊಡಗಿದ್ದವಂತೆ.

ಕೃಷ್ಣಶರ್ಮರ ಅವಸ್ಥೆಯೂ ಈ ತೆರನಾದದ್ದೇ. ಇನ್ನೂ ಅವರಿಗೊಂದು ಸ್ವಂತ ಮನೆಯಿಲ್ಲ. ತೀರ ಇತ್ತೀಚಿನ ವರೆಗೂ ಹೊಟ್ಟೆ ಬಟ್ಟೆಗಳಿಗಾಗಿ ಸಾಕಷ್ಟು ಧನ ಪ್ರಾಪ್ತಿಯ ಅಭಾವ. ವಿಧಿಯೂ ಸಮಾಜದಷ್ಟೇ ನಿರ್ದಯನಾಗಿ ವೃದ್ಧಾಪ್ಯದಲ್ಲಿ ಪಾರ್ಶ್ವವಾಯು ಪ್ರಹಾರಗೈದಿದ್ದಾನೆ. ಆದರೂ ಈ ಮನಸ್ವೀ ಯಾರಿಗೂ ತಲೆಬಾಗಿದವನಲ್ಲ. ಮುಖಸ್ತುತಿ ಮಾಡಿದವನಲ್ಲ. ಸರಳ ಮಾರ್ಗವನ್ನು ಬಿಟ್ಟು ಕುತಂತ್ರದಿಂದ ಕಾರ್ಯಸಿದ್ಧಿಗೆ, ಪ್ರಸಿದ್ಧಿಗೆ, ಸಮೃದ್ಧಿಗೆ ಎಳಸಿದವನಲ್ಲ. ತಡವಾದರೂ ಚಿಂತೆಯಿಲ್ಲ. ಅವರಿಗೆ ಕರ್ನಾಟಕ ವಿಶ್ವವಿದ್ಯಾಲಯವು ಇತ್ತ ಡಾಕ್ಟರೇಟ ಪದವಿ, ಕನ್ನಡಾಧ್ಯಯನ ಬ್ರಾಹ್ಮಣ ವಿಭಾಗದಮುಖ್ಯ ಸ್ಥಾನ ಇತ್ಯಾದಿಗಳು ಅಯಾಚಿತವಾಗಿ ಬಂದಂಥವು.

ಪಾರ್ಶ್ವವಾಯು ಪೀಡಿತರಾದ ಅವರನ್ನು ನಾನು ಮೊದಲ ಸಲ ಕಾಣಲು ಹೋದಾಗ, ಅವರ ಕಣ್ಣಿಂದ ಕಂಬನಿಗಳು ಧಾರಾಕಾರವಾಗಿ ಸುರಿಯಲಾರಂಭಿಸಿದವು. ಕೆಲ ನಿಮಿಷಗಳ ನಂತರ "ಇನ್ನೂ ನಾನು ಅನೇಕ ಕೃತಿಗಳನ್ನು ರಚಿಸಬೇಕೆಂದು ಮನಸ್ಸಿನಲ್ಲಿ ಮುಂಡಿಗೆ ಮಾಡಿದ್ದೆ" ಈಗ ನೋಡಿ ನನ್ನ ಅವಸ್ಥೆ ! ಎಂದು ನಾಲಿಗೆ ತಡವರಿಸುತ್ತ ನುಡಿಯಿತು. ಆಗ ನನಗೆ Milton on his blindness ಎಂಬ ಅಷ್ಟಪಟ್ಟದಿ ನೆನಪಾಯಿತು. "ದೇವರು ನನಗೊಂದು ಅಸಾಮಾನ್ಯ ಪ್ರತಿಭೆಯ ವರದಾನ ಮಾಡಿದ್ದಾನೆ. ಅದರಿಂದ ಅವನ ಮಹಾತ್ಮ್ಯವನ್ನು ಕೊಂಡಾಡುವ ಗ್ರಂಥಗಳನ್ನೇ ನಿರ್ಮಿಸಿದ್ದೇನೆ. ಇನ್ನೂ ಹೆಚ್ಚು ಅವನ ಸೇವೆ ಮಾಡಬೇಕು. ಮಸ್ತಕದಲ್ಲಿ ಪರಿಪಕ್ವವಾಗಿ ಬೆಳೆದುನಿಂತ ಪೈರನ್ನು ನನ್ನ ಲೇಖನೀ ರಾಶಿ ಮಾಡಬೇಕು ಎಂದು ಹಾತೊರೆಯುತ್ತಿರುವಾಗಲೇ, ದೇವರು ನನ್ನನ್ನು ಅಂಧತ್ವದ ಶಾಪಕೂಪದಲ್ಲಿ ನೂಕಿದ್ದಾನೆ. ಇದೆಂಥ ನ್ಯಾಯ!" ಎಂದು ಮೊರೆಯಿಡುತ್ತಾನೆ. ಕೂಡಲೇ ಒಳಗಿನ ವಿವೇಕವಾಣಿ ಎಚ್ಚರಿಸುತ್ತದೆ; "ದೇವನ ಕಾರ್ಯವನ್ನು ಪೂರ್ತಿಗೊಳಿಸಲು ನೀನು ಎಷ್ಟರವ ? ಅವನ ಇಚ್ಛಾಮಾತ್ರದಿಂದ ಸಾವಿರ ಸಾವಿರ ಮೇಧಾವಿಗಳು ಭೂಮ್ಯಾಕಾಶಗಳಲ್ಲಿ ಧಾವಿಸುತ್ತಾರೆ. ಅವನು ಹೇರಿದ ಹಗುರಾದ ಭಾರವನ್ನು ತಾಳ್ಮೆಯಿಂದ ಸಹಿಸಿದರೆ ಸಾಕು. ಅದೇ ಅವನ ಸೇವೆ. They also serve who only stand and wait ಎಂದು ಸಮಾಧಾನ ಪಟ್ಟುಕೊಂಡು ಸಂತೃಪ್ತ ಮನಸ್ಕನಾಗುತ್ತಾನೆ. ಇವನು ನಿಜವಾದ ಧಿರೋದಾತ್ತ, ವಿನಯಶಾಲಿ, ಮನೀಷೀ, ಕವಿ. ಕೃಷ್ಣಶರ್ಮರೂ ಇಂಥ ಸಾತ್ವಿಕ ಸಹನಾಮೂರ್ತಿ. ಅವರಿಗೆ ನಿರಂತರ ಜೀವನದುದ್ದಕ್ಕೂ ಕಾವ್ಯ ನಿರ್ಮಿತಿಯ ಸ್ಫೂರ್ತಿ.

ಆಂಗ್ಲ ಕವಿ ಮಿಲ್ಟನ್ ಕನ್ನಡ ಕವಿ ಕೃಷ್ಣಶರ್ಮಾ ಇಬ್ಬರ ಜೀವನ ಹಾಗೂ ಕೃತಿಗಳಲ್ಲಿ ಕೆಲವೊಂದು ಸಾಮ್ಯ ವೈಷಮ್ಯಗಳುಂಟು. ಇಬ್ಬರೂ ಸಾಧು ಸಜ್ಜನರು. ಆ ಅನಂತ ಶಕ್ತಿಯಲ್ಲಿ ಅಪಾರ ಭಕ್ತಿಯುಳ್ಳವರು, ಪ್ರತಿಭಾವಂತರು, ಪಂಡಿತರು. ಕೃಷ್ಣಶರ್ಮರು ವ್ಯಾಸಪೀಠದ ಮೇಲಿನ ಭಾಷಣ ಬಹಾದ್ದೂರರಲ್ಲ. ಅದೂ ಒಂದು ಅವರ ಅಪ್ರಸಿದ್ಧಿಗೆ ಕಾರಣವಾಗಿರಬಹುದು. ಅವರದು ಸರ್ವಂಕಷವಾದ ವಿದ್ವತ್ತೆ. ಕನ್ನಡದಲ್ಲಿಯ ಹಳೆ ಹೊಸ ಎಲ್ಲ ಗ್ರಂಥಗಳನ್ನು ತಿರುವಿ ಹಾಕಿದ್ದರಲ್ಲದೆ, ಸಂಸ್ಕೃತದಲ್ಲಿಯ ವಾತ್ಸ್ಯಾಯನನ ಕಾಮಶಾಸ್ತ್ರದಿಂದ ಮೊದಲು ಮಾಡಿ, ಸಾಂಖ್ಯಯೋಗ ಮೊದಲಾದ ದಾರ್ಶನಿಕ ಹೆಬ್ಬೊತ್ತಿಗೆಗಳ ಅನುವಾದಗಳ ಆಳವಾದ ಅಭ್ಯಾಸವನ್ನೂ ಮಾಡಿದ್ದರು. ಅವರೊಂದು ಚಲಿಸುವ ವಿಶ್ವಕೋಶ. ಅದು ಅವರ ಖಾಸಗಿ ಸಂಭಾಷಣೆಯಲ್ಲಿ ಪದೇ ಪದೇ ವ್ಯಕ್ತವಾಗುತ್ತಿತ್ತು. ಈ ಮತ್ತು ಇತರ ಅನೇಕ ಅರ್ಥಗಳನ್ನು ಅಭಿವ್ಯಕ್ತಿಸಲು ಸಂಸ್ಕೃತದಲ್ಲಿ ಒಂದೇ ಪದವಿರುವದು. ಅದೆಂದರೆ 'ಮನೀಷೀ' ಈ ಉದಾತ್ತಾರ್ಥಗರ್ಭಿತ ಶಬ್ದವನ್ನು ಉಪನಿಷತ್ಕಾರರು, ಅಭಿಜಾತ ಸಂಸ್ಕೃತ ಕವಿಗಳು ಸಮಯೋಚಿತ ಸಂದರ್ಭಗಳಲ್ಲಿ ಬಳಸಿಕೊಂಡಿದ್ದಾರೆ.

ಮಿಲ್ಟನ್ನನ ಕಾವ್ಯಗಳು ಸಾಗರದ ವಿಸ್ತಾರ, ಗಾಂಭೀರ್ಯ, ಆರ್ಭಟಗಳನ್ನು ಪ್ರತಿಬಿಂಬಿಸುತ್ತಿದ್ದರೆ, ಕೃಷ್ಣಶರ್ಮರ ಕವಿತೆಗಳಲ್ಲಿ, ವಿಶೇಷತಃ ಜಾನಪದ ಜೀವನಕ್ಕೆ ಸಂಬಂಧಿಸಿದ ಭಾವಗೀತೆಗಳಲ್ಲಿ ಹಳ್ಳಿಯ ಪಕ್ಕದಲ್ಲಿ ಜುಳುಜುಳು ಹರಿಯುವ ಹಳ್ಳದ ಹಾಸ್ಯವೂ, ಮೃದು ಮಧುರ ಲಾಸ್ಯವೂ ಕಿವಿಗೆ ಇಂಪಾಗಿವೆ, ಮನಕ್ಕೆ ಆಪ್ಯಾಯಮಾನವಾಗಿವೆ. ಒಂದು ನುಡಿಯನ್ನು ಉದಾಹರಣೆಗೆಂದು ಇಲ್ಲಿ ಕೊಡಬಹುದು:

ದೇವರದೆಂಥಾ ದೊಡ್ಡಿಸ್ತನ ಬಿಡು
ನನ್ನ ದೊರೆಯೇ ಮೇಲ
ನನ್ನ ಹೊರತು ಇನ್ನೊಂದು ಹೆಣ್ಣ
ಮ್ಯಾಲಿಲ್ಲ ಅವಗ ಖ್ಯಾಲ

ಎಂದು ಒಬ್ಬ ಮುಗುದೆ ತನ್ನ ಪತಿಯ ಪ್ರೇಮವನ್ನು ಅವ್ಯಾಜ ಮನೋಹರವಾಗಿ ಬಣ್ಣಿಸುತ್ತ, ರಾಮ, ಕೃಷ್ಣ, ಶಿವ ಬ್ರಹ್ಮ ಈ ತ್ರಿಮೂರ್ತಿಗಳು ತಮ್ಮ ಅರ್ಧಾಂಗಿನಿಯರನ್ನು ಗೋಳಿಗೀಡು ಮಾಡಿದ್ದಾರೆ, ಎಂಬುದನ್ನು ಮೃದು ಹಾಸ್ಯದಲ್ಲಿ ಗೇಲಿಗೆಯ್ದು ತನ್ನ ಪತಿಯ ಮೇಲ್ಮೆಯನ್ನು ತೋರಿಸಿದ್ದಾಳೆ.

ಮಿಲ್ಟನ್ನನು ಉಚ್ಚ ಸ್ಥಾನಮಾನಗಳನ್ನು ಪಡೆದು ಮಂತ್ರಿಪದದ ಶಿಖರಕ್ಕೂ ಏರಿದವನು, ಕಾರಾವಾಸದ ಕರಾಳ ದುಃಖವನ್ನೂ ಅನುಭವಿಸಿದವನು. ಇಂಥ ಅಸಾಮಾನ್ಯ ಏರುಪೇರುಗಳಿಂದ ಕೃಷ್ಣಶರ್ಮರ ಜೀವನ ವಿಮುಕ್ತ. ಅದೊಂದು ಬಯಲು ಸೀಮೆಯ ಹಳ್ಳಿಯ ಹೊಂಡ. ಬೇಸಗೆಯಲ್ಲಿ ಬತ್ತುವ, ಮಳೆಗಾಲದಲ್ಲಿ ಸುತ್ತ ಮುತ್ತ ಹಚ್ಚಹಸರಿನಿಂದ ಮನ ಮೆಚ್ಚಿಸುವ, ಮಾಗಿಯ ಕಾಲಕ್ಕೆ ಬಂಗಾರ ವರ್ಣಕ್ಕೆ ತಿರುಗಿದ ಪೈರುಗಳಿಂದ ಕಂಗೊಳಿಸುವ, ನೀರು ತುಂಬಲು ಬಂದ ಮುಗುದೆಯರ ಸರಸ ಸಲ್ಲಾಪ, ಹಕ್ಕಿಪಕ್ಕಿಗಳ ಉಲಿವು ಇವುಗಳಿಂದ ಸೊಬಗಾಂತ ಸನ್ನಿವೇಶವನ್ನು ಕಣ್ಣೆದುರು ನಿಲ್ಲಿಸುತ್ತವೆ, ಈ ಜಾನಪದ ಕವಿಯ ಜೀವನ ಮತ್ತು ಕಾವ್ಯ.

ತಂದೆ–ತಾಯಿಯರು ಅಕ್ಕರೆಯಿಂದ ಇವರಿಗೆ ಕೃಷ್ಣಶರ್ಮಾ ಎಂದು ಹೆಸರಿಡದೆ, ರಾಮಶರ್ಮಾ ಎಂದು ನಾಮಕರಣ ಮಾಡಿದ್ದರೆ ಹೆಚ್ಚು ಅನ್ವರ್ಥಕವಾಗುತ್ತಿತ್ತು. ಪೂರ್ವಾರ್ಧದಲ್ಲಿ ಎಲ್ಲರ ಕಣ್ಮಣಿಯಾಗಿ ಲೀಲಾವಿನೋದದಲ್ಲಿ, ತರುಣನಾಗಿದ್ದಾಗ ಯಮುನಾ ತಟದ ರಾಸವಿಲಾಸದಲ್ಲಿ, ಉತ್ತರಾರ್ಧದಲ್ಲಿ ಭಾರತದ ರಂಗದ ಮೇಲೆ ರಾಜ್ಯ ಸಾಮ್ರಾಜ್ಯಗಳ ಅಳಿವು–ಉಳಿವುಗಳ ಭಾಗ್ಯಪಂಕ್ತಿಯನ್ನು ನಿರ್ಧರಿಸಿವ ತಿರುಗುವ ಚಕ್ರಾರ ಪಂಕ್ತಿಗಳ ಕೇಂದ್ರ ಬಿಂದುವಾಗಿ ಜೀವನದ ಸೌಖ್ಯಸಾರವನ್ನು ಆ ಕಂಠ ಹೀರಿದ ಅಪ್ರತಿಮ ಸಾಹಸವನ್ನು ಮೆರೆದ ಆ ಅವತಾರೀ ಪುರುಷನ ಜೀವನವನ್ನು ಸಮಾನ ನಾಮಧೇಯನಾದ ಈ ಕವಿಯ ಜೀವನಕ್ಕೆ ಹೋಲಿಸಿದರೆ, ಆಧ್ಯಾತ್ಮಿಕವಾಗಿ ಉನ್ನತವಾಗಿದ್ದರೂ ಆರ್ಥಿಕವಾಗಿ ಅವನ ಭಕ್ತ ಸುದಾಮನ ಬಾಳಿನಂತೆ ಬಡವಾಗಿತ್ತು ಈ ಕವಿಯ ಬದುಕು. ಆ ಇನ್ನೊಬ್ಬ ಅವತಾರೀ ಪುರುಷನ ಜೀವನವು ಮಾತ್ರ ಆದ್ಯಂತ ದುಃಖ ಪರಿಪೂರ್ಣ. ಅದನ್ನು ಮಾರ್ಮಿಕವಾಗಿ ಒಂದೇ ಶ್ಲೋಕದಲ್ಲಿ ರಾಮನ ಬಾಯಿಂದಲೇ ನುಡಿಸಿದ್ದಾನೆ ಕವಿ ಭವಭೂತಿ ಉತ್ತರರಾಮ ಚರಿತ ನಾಟಕವಲ್ಲಿಃ

"ರಾಜಭ್ರಂಶಃ ವನೇ ವಾಸಃ ಸೀತಾ
ತ್ಯಕ್ತಾ ದ್ವಿಜೋ ಹತಃ ।
ಅಲಕ್ಷ್ಮೀರೀದೃಶೀಯಂ ಮೇ ನಿರ್ದಹೇದಪಿ
ಪಾವಕಂ ॥"

"ತಾರುಣ್ಯದಲ್ಲಿ ರಾಜ್ಯಭ್ರಂಶ, ನಂತರ ವನವಾಸ, ಆ ಸೀತಾಪಹರಣ ಮತ್ತು ಪರಿತ್ಯಾಗ. ಕೊನೆಗೆ ಮೇಲೆ ಬಂದುದು ದ್ವಿಜನನ್ನು ವಧಿಸುವ ಪ್ರಸಂಗ ! ಎಲ್ಲವನ್ನೂ ಸುಟ್ಟು ಭಸ್ಮ ಮಾಡುವ ಬೆಂಕಿಯನ್ನೇ ಸುಡುವಷ್ಟು ತೀವ್ರತರವಾಗಿದೆ, ದಾರುಣವಾಗಿದೆ ನನ್ನ ದೌರ್ಭಾಗ್ಯ !"

ಕೃಷ್ಣಶರ್ಮರ ಬದುಕೂ ಈ ಬಗೆಯದೇ. ಮೊದಲೇ ಬಡತನ, ಚರಿತಾರ್ಥಕ್ಕೆ ಯಾವ ಉಪಾಯವೂ ಇಲ್ಲ. ಸುಶೀಲ, ವಿಧೇಯ, ಮೇಧಾವೀ ತಮ್ಮನ ಭಾವೀ ಸಂಪಾದನೆಯ ಮೇಲೆ ಭರವಸೆಯಿಟ್ಟುಕೊಂಡು, ಪದವೀಪರ್ಯಂತ ಅವನ ಶಿಕ್ಷಣದ ಭಾರ ವಹಿಸಿದ್ದು. ಅಷ್ಟರಲ್ಲಿ ಅವನ ಆಕಸ್ಮಿಕ ಮರಣ, ನಂತರ ಸುಮಾರು ಒಂದು ದಶಕ ಕ್ಷಯರೋಗ ಪೀಡಿತಳಾಗಿ ಧರ್ಮಪತ್ನಿ ಹಾಸಿಗೆ ಹಿಡಿದದ್ದು. ಅವಳ ಶುಶ್ರೂಷೆಯ ಎದೆಗುದಿ ಹಾಗೂ ವೆಚ್ಚ, ಅವಳ ಮರಣಾನಂತರ, ಸ್ವಯಂಪಾಕ ಕೈಕೊಂಡು ಕೈ ಬಾಯಿ ಸುಟ್ಟುಕೊಂಡದ್ದು, ಒಬ್ಬ ಪುತ್ರನ ಇಬ್ಬರು ಪುತ್ರಿಯರ ಶಿಕ್ಷಣ ವಿವಾಹಾದಿಗಳ ಹೊಣೆಗಾರಿಕೆ. ಕೊನೆಗೆ

ಪಾರ್ಶ್ವವಾಯು ಪೀಡಿತರಾಗಿ ಮನೆ ಬಿಟ್ಟು ಹೊರಗೆ ಅಲುಗಾಡದ ಸ್ಥಿತಿ; ಇದಕ್ಕೂ ಮಿಗಿಲಾದ ಸಂಸಾರ ತಾಪತ್ರಯ ಮತ್ತೇನಿರಬೇಕು ? ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪಿತಾ-ಪುತ್ರರಿಗೆ ದೊರೆತ ನೌಕರಿಯ ದೆಸೆಯಿಂದಾಗಿ ಐದಾರು ವರುಷ ಆರ್ಥಿಕ ಆಪತ್ತು-ವಿಪತ್ತುಗಳಿಂದ ವಿಮುಕ್ತಿ ದೊರೆತ ಅಲ್ಪಾವಧಿ ಮಾತ್ರ ಸುಖಮಯ ಜೀವನ ಎಂದು ಕರೆಯಬಹುದು.

ಸಂತತವಾಗಿ ಬೆನ್ನು ಬಿಡದ ಇಂಥ ವಿಷಮ ಪರಿಸ್ಥಿತಿಯಲ್ಲಿಯೂ ಅವರು ಮಾಡಿದ ಸಾಹಿತ್ಯಸೇವೆ ನಿಜವಾಗಿ ಅದ್ಭುತ. ಇದನ್ನವರು ನೆರವೇರಿಸಿದ್ದು "ಆನಂದಕಂದ" ಎಂಬ ಕಾವ್ಯನಾಮದ ಅಂಕಿತದಲ್ಲಿ. ಇದೂ ಒಂದು ವಿರೋಧಾಭಾಸ. ತಾರುಣ್ಯದ ಹುರುಪು-ಹುಮ್ಮಸ್ಸಿನಲ್ಲಿ ಅದನ್ನವರು ಆರಿಸಿರಬೇಕು. ಮುಂದವರು ಅದನ್ನು "ದುಃಖದ ದೇವದಾರು" ಎಂದು ಬದಲಿಸಿದ್ದರೆ ಉಚಿತವಾಗುತ್ತಿತ್ತೇನೊ ? ಆಳವಾಗಿ ವಿಚಾರಿಸಿದಾಗ, ಈ ಅಭಿಧಾನದಿಂದಗಲದಿದ್ದುದೇ ಯೋಗ್ಯ ಎನಿಸುತ್ತದೆ. ಇಪ್ಪತ್ತು ವರ್ಷದ ಅವರ ನಿಕಟ ಸಂಬಂಧ, ಸಾನಿಧ್ಯ, ಸಹವಾಸ, ಸಾಹಚರ್ಯ, ಸ್ನೇಹ-ಸೌಹಾರ್ದಗಳ ಬಲದಿಂದ ನಾನಿದನ್ನು ಹೇಳುತ್ತಿದ್ದೇನೆ. ಇದು ಅವರ ಜೀವನೋತ್ಸಾಹದ (zent for life), ಅವಿರತ ಪರಿಶ್ರಮದ ಎಂಥ ವಿಷಮ ಪರಿಸ್ಥಿತಿಗಳಲ್ಲಿಯೂ ಧೈರ್ಯಗುಂದದ, ವ್ಯಗ್ರವಾಗದ, ಫಲಾಶೆ, ತೊರೆದು ಕಾರ್ಯಮಗ್ನವಾಗುವ "ಸ್ಥಿತಪ್ರಜ್ಞನ ಸಂಕೇತ. ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಹೇಳಿದ ಬಹಳಷ್ಟು ಅಂಶಗಳನ್ನು ಅವರು ತಮ್ಮ ವ್ಯಕ್ತಿತ್ವದಲ್ಲಿ ಅಳವಡಿಸಿಕೊಂಡಿದ್ದಾರೆ. (ಜೀವನ ದುಃಖಮಯವಾಗಿದ್ದರೂ.) ಅದರ ಬೇರು ಆನಂದ ಆನಂದಕಂದ ಆನಂದವೇ ಮೂಲವಾದದ್ದು.) ಆನಂದದಿಂದಲೇ ಎಲ್ಲ ಪ್ರಾಣಿಗಳೂ ಜೀವಿಸುತ್ತವೆ. ನಿಧನಾನಂತರ, ಆನಂದದಲ್ಲಿಯೇ ಲೀನವಾಗುತ್ತವೆ." "ಆನಂದಾದ್‌ಹ್ಯೇವ ಖಲ್ಮಮಾನಿ ಭೂತಾನಿ ಜಾಯಂತೇ ಆನಂದೇನ ಜಾಲಾನಿ ಜೀವಂತಿ, ಆನಂದಂ ಪ್ರಯಂತಿ. ಅಭಿಸಂವಿಶಂತಿ." ಎಂಬುದು ಉಪನಿಷದ್ವಾಕ್ಷ. ಪರಮಾತ್ಮನು 'ಸಚ್ಚಿದಾನಂದ'. ಅವನ ಪ್ರತಿಬಿಂಬನಾದ ಜೀವಾತ್ಮನ ಮೂಲ ಸ್ವರೂಪವೂ ಅಂಥದೇ. ಈ ಅರ್ಥದಿಂದ ಗರ್ಭಿತವಾಗಿದೆ- ಆನಂದಕಂದ ಎಂಬ ಅಭಿಧಾನ. ಅವರ ಮುಖದಲ್ಲಿ ಯಾವಾಗಲೂಮಂದಹಾಸ ಮಾರ್ದವ ಕಾರುಣ್ಯ ಲಾಸ್ಯವಾಡುತ್ತವೆ. ಕೋಪ - ತಾಪಗಳ ಸ್ಫೋಟ ಮದ-ಮಾತ್ಸರ್ಯಗಳ ಆವಿರ್ಭಾವ ತೀರ ವಿರಳ. God's presence is seen more in the gentle breze than in the violent storm' ವಿಪ್ಲವಕಾರೀ ಝಂಝಾವಾತದಕಿಂತ ಶೃಜನಾತ್ಮಕ ಮಂದ ಮಲಯ ಮಾರುತನಲ್ಲಿ ಪರಮಾತ್ಮನ ಸಾನಿಧ್ಯ ಮಿಗಿಲಾಗಿರುತ್ತದೆ." ಎಂಬ ಕವೀಂದ್ರ ರವೀಂದ್ರರ ಉಕ್ತಿಗೆ ಇವರು ನಿದರ್ಶನ. ನಾನೃಷಿಃ ಕುರುತೇ ಕಾವ್ಯಂ" ಎಂಬಂತೆ ಸತ್ಕಾವ್ಯ ನಿರ್ಮಿತಿಯೂ ಒಂದು ದೀರ್ಘ ತಪಸ್ಸು.

> ಸ್ವಾಭಾವಿಕೀ ಚ ಪ್ರತಿಭಾ ಶ್ರುತಂ ಚ ಬಹು
> ನಿರ್ಮಲಂ।
> ಅಮಂದಶ್ಚಾಭಿಯೋಗೋऽಸ್ಯಾಃ ಕಾರಣಂ
> ಕಾವ್ಯಸಂಪದಃ ॥"

ಜನ್ಮಜಾತ ಪ್ರತಿಭೆ, ನಿಖರ-ನಿರ್ಮಲವಾದ ಬಹುಶೃತತ್ವ, ಎಂದರೆ ಸಕಲ ವಿಷಯಗಳ ಆಳವಾದ ಅಭ್ಯಾಸ ಮತ್ತು ಸಂತತ ಪರಿಶ್ರಮ ಈ ಮೂರು ಕಾವ್ಯ ಸಂಪತ್ತಿಗೆ ಕಾರಣ ಎಂದು ದಂಡಿ ಕಾವ್ಯಾದರ್ಶದಲ್ಲಿ ಹೇಳಿದ್ದಾನೆ. ಈ ಮೂರು ಇದ್ದವ ವರ ಕವಿ, ಊನನಾದವ ನರ ಕವಿ.

ಕವಿ ಮತ್ತು ಮನೀಷಿಯಾದವನನ್ನು ಅಮರಕೋಶ "ಧೀರೋ ಮನೀಷೀಜ್ಞಃ ಪ್ರಾಜ್ಞಸ್ಸಂಖ್ಯಾವಾನ್ ಪಂಡಿತಃ ಕವಿಃ" ಎಂದು ಸಮಾನಾರ್ಥಕ ಶಬ್ದಗಳ ಒಂದೇ ಸಾಲಿನಲ್ಲಿ ಎಣಿಸಿದೆ. ಆಪ್ಟೆಯವರ ಶಬ್ದಕೋಶವು "ಮನೀಷಿನ್" ಎಂಬುದಕ್ಕೆ Wise, learned, intelligent, clever, Thoughtful prudent a sage, a pandit ಎಂಬ ಅರ್ಥಗಳನ್ನು ಕೊಡುತ್ತದೆ. ಸಂದರ್ಭಾನುಸಾರವಾಗಿ ಇವುಗಳಲ್ಲಿ ಯಾವುದನ್ನೂ ಅಥವಾ ಎಲ್ಲವನ್ನೂ ಆಯ್ದುಕೊಳ್ಳಬಹುದು.

ಕವಿಯೂ ಮನಿಷಿಯೂ ಆದ ಕನ್ನಡದ ಕವಿ ಭೂಷಣರಿಗೆ ಈ ಚಿಕ್ಕ ಲೇಖ ಅವರ ಆಪ್ತ ಸ್ನೇಹಿತನ ಆತ್ಮೀಯ ಮೆಚ್ಚುಗೆ, ಪ್ರಣಾಮ.

ಡಾ. ಬಿ. ಆರ್. ನಾಡಗೌಡ

# ಡಾ. ಬೆಟಗೇರಿ ಕೃಷ್ಣಶರ್ಮರೊಂದಿಗೆ-

ಸುಮಾರು ೩೦ ವರ್ಷಗಳಷ್ಟು ಹಿಂದೆಯೇ 'ಆಶಾಂತಿ ಪರ್ವ', 'ರಾಜಯೋಗಿ', 'ಮಂಗಳ ಮದುವೆ' 'ಸಣ್ಣ ಕಥೆಗಳು' ಮುಂತಾದವುಗಳನ್ನು ಓದಿದಾಗ ಉಳಿದು ಕೊಂಡ ಶ್ರೀ ಬೆಟಗೇರಿ ಕೃಷ್ಣ ಶರ್ಮರ ಪ್ರಭಾವ ಆಕರ್ಷಣೆ ಇನ್ನು ಹೆಚ್ಚಾಗಿ ಬೆಳೆದು, ಪ್ರೀತಿ-ವಿಶ್ವಾಸಗಳು ಹೆಮ್ಮರ ವಾಗಿ ಬೆಳೆದುದು ನನ್ನ ಸೌಭಾಗ್ಯವೆಂದೇ ಭಾವಿಸಿದ್ದೇನೆ.

೧೯೬೨ ರಲ್ಲಿ ಧಾರವಾಡದಲ್ಲಿಯ ಅವರ ಜಯಂತಿ ಕಾರ್ಯಾಲಯದಲ್ಲಿ ಅವರನ್ನು ನಾನು ಮೊದಲು ಬಾರಿಗೆ ಕಂಡೆ. ಅವರನ್ನು ಪ್ರತ್ಯಕ್ಷವಾಗಿ ಕಂಡಾಗ ನನಗೆ ಆಶ್ಚರ್ಯಾ ಘಾತವೇ ಆಯಿತು. ಅವರ ಅಪಾರವಾದ ಶಾರೀರಿಕ ದೌರ್ಬಲ್ಯವನ್ನು ಸಂಪೂರ್ಣ ಅಲಕ್ಷಿಸಿ, ಬೌದ್ಧಿಕ ಕ್ಷೇತ್ರ ದಲ್ಲಿ ಅಪಾಟವಾಗಿ ಬೆಳೆದುನಿಂತ ಅವರನ್ನು ಕಂಡಾಗ ಸುಧಾರಿಸಿಕೊಳ್ಳಲು ಕೆಲವು ಕ್ಷಣಗಳೇ ಹಿಡಿದವು. ಆರು ವರ್ಷಗಳ ಹಿಂದೆ ಸಿಂದಗಿಯ ಭಾರತೀಯ ಸಂಸ್ಕೃತಿ ಪ್ರಸಾರ ಮಂಡಳಕ್ಕೆ ಆಮಂತ್ರಿಸಿದ್ದೆ. ಭೀಮಾಶಂಕರ ಮಠದ ಉತ್ಸವವೂ ಇದ್ದುದರಿಂದ ಸಂತೋಷಗೊಂಡು ಬಂದರು. ಅಂದು ಭೀಮಾಶಂಕರ ಮಠದಲ್ಲಿಯೇ ಸಭೆಯ ವ್ಯವಸ್ಥೆ ಮಾಡಲಾಗಿತ್ತು.

ಬೆಟಗೇರಿಯವರು ನಮ್ಮ ಸಂಸ್ಕೃತಿ ಧರ್ಮಗಳ ಭಾವೈಕ್ಯ ಹಾಗೂ ಸಮಾನತೆಯನ್ನು ಸಮಾಜದಲ್ಲಿ ಪ್ರತಿ ಷ್ಠಾಪಿಸಲು ಯಾವ ರೀತಿ ಕಾರ್ಯಮಾಡಿದವು ಎಂಬು ದನ್ನು ತಮ್ಮ ಉಪನ್ಯಾಸದಲ್ಲಿ ಮಂಡಿಸಿದರು. ಉಪ ನಿಷತ್ತಿನಲ್ಲಿ ಬರುವ ದಾನವ, ಮಾನವ, ದೇವತೆಗಳನ್ನು ಬ್ರಹ್ಮನು 'ದ' ಎಂಬ ಆಶೀರ್ವಾದ ನೀಡಿದ ಕಥೆಯನ್ನೂ ಅದರ ಅರ್ಥವನ್ನೂ ಸ್ವಾರಸ್ಯವಾಗಿ ಹೇಳಿದರು. "ಅನೇಕ ಮಠಗಳು ಧರ್ಮ ಜಾಗೃತೆಗಾಗಿ ಕಾರ್ಯ ನಿರ್ವಹಿಸು ತ್ತಿರುವವು. ಅನ್ನಸಂತರ್ಪಣೆಗಾಗಿಯೂ ಖರ್ಚು ಮಾಡುತ್ತಿವೆ. ಅದರ ಜೊತೆಗೆ ಪ್ರತಿಭಾವಂತ ವಿದ್ಯಾರ್ಥಿ ಗಳನ್ನು ಗುರುತಿಸಿ ಅವರಿಗೆ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಡುವದೂ ಒಂದು ಕರ್ತವ್ಯವೆಂದು ಭಾವಿಸ ಬೇಕು. ಇದರಿಂದ ಸಮಾಜದ ಏಳಿಗೆಯೂ ಆಗುವದು" ಎಂದು ಹೇಳಿದರು.

ಕೆಲವು ದಿವಸಗಳಿಂದ ನನಗೆ ಒಂದು ವಿಷಯವನ್ನು ತಿಳಿಯಬೇಕಾಗಿತ್ತು. ಸಾಮಾನ್ಯವಾಗಿ ಒಂದು ಊರಿನ "ಪೂರ, ಊರ, ಕೇರಿ, ವಾಡೆ"–ಇತ್ಯಾದಿಗಳಿಂದ ಪೂರ್ತಿ ಯಾಗಿರುತ್ತದೆ. ಆದರೆ ಅನೇಕ ಊರುಗಳು 'ಗಿ' ಅಕ್ಷರ ದಿಂದ ಮುಕ್ತಾಯವಾಗುವದನ್ನು ಕಾಣಬಹುದು. ಉದಾ: ಕೌಲಗಿ, ಕಲಬುರ್ಗಿ, ಹೊನ್ನುಟಗಿ, ಹಿಪ್ಪರಗಿ, ಸಿಂದಗಿ, ಮೋರಟಗಿ, ಜೇವರಗಿ—ಇತ್ಯಾದಿ. 'ಗಾಂವ' ಶಬ್ದವೇ ಮೊಟಕುಗೊಂಡು 'ಗಿ' ಆಗಿದೆಯೇ ಎಂಬ ಸಂಶಯ. ಕೃಷ್ಣಶರ್ಮರ ಜೊತೆಗೆ ಊಟಕ್ಕೆ ಕುಳಿತಾಗ–ಈ ವಿಷಯ ವನ್ನು ಪ್ರಸ್ತಾಪಿಸಿದಾಗ, ಅದಕ್ಕೆ ಸಮಂಜಸವಾದ ಉತ್ತರ ದೊರೆಯಿತು. 'ಗೇಯ' ಅಂದರೆ "ಪ್ರದೇಶ." ಅದರ ಅಪಭ್ರಂಶ ರೂಪವೇ "ಗಿ" ಯಾಗಿದೆ ಎಂದು ವಿವರಣೆ ನೀಡಿದರು.

ಒಮ್ಮೆ ಕರ್ನಾಟಕ ರಾಜ್ಯೋತ್ಸವದ ಸಂದರ್ಭ ದಲ್ಲಿ ನಮ್ಮೂರಿನ ಕನ್ನಡ ಬಳಗದ ಕಾರ್ಯಕ್ರಮಕ್ಕೆ ಶ್ರೀ ಅಣ್ಣಾ ಗುರೂಜಿಯವರು ಬಂದಿದ್ದರು. ಅವರು "ನಾನು ಈ ಸಂದರ್ಭದಲ್ಲಿ ವಿಶೇಷ ಉಪನ್ಯಾಸ ಮಾಡು ವುದಿಲ್ಲವೆಂದು ಹೇಳಿ, ಕೃಷ್ಣಶರ್ಮರ "ನನ್ನದು ಈ ಕನ್ನಡ

ನಾಡು"– ಎಂಬ ಕವನದ ಒಂದೊಂದು ನುಡಿಯನ್ನು ಹೇಳುತ್ತ, ಅರ್ಥ ವಿವರಿಸಿ ಅದಕ್ಕೆ ಪೂರಕವಾಗಿ ಉದಾಹರಣೆಗಳನ್ನು ಹೇಳುವಾಗ ನಮಗೆಲ್ಲ ರೋಮಾಂಚನವಾಯಿತು. ಸಂಜೆ ನಾವೆಲ್ಲ ನಮ್ಮ ಮನೆಯಲ್ಲಿ ಊಟಕ್ಕೆ ಕುಳಿತಾಗ ನಮ್ಮ ಹುಡುಗರು ಅಣ್ಣಾ ಗುರೂಜಿಯವರಿಂದ ಮತ್ತೊಮ್ಮೆ ಆ ಪದ್ಯಗಳನ್ನು ಹೇಳಿಸಿಕೊಂಡರು. ಹುಡುಗರ ಮೇಲೆ ಕೂಡ "ನನ್ನದು ಈ ಕನ್ನಡನಾಡು"– ಅಷ್ಟೊಂದು ಪ್ರಭಾವ ಬೀರಿತ್ತು.

ಪ್ರಾಸಂಗಿಕವಾಗಿ ಹಿರಿಯರೊಬ್ಬರ ಬಾಯಿಯಿಂದ ಕೇಳಿದ ಮಾತನ್ನು ಇಲ್ಲಿ ಜ್ಞಾಪಿಸಿಕೊಂಡರೆ ತಪ್ಪಾಗಲಿಕ್ಕಿಲ್ಲ. ಸುಮಾರು ೬೦ ವರುಷಗಳ ಹಿಂದೆ, ಜಮಖಂಡಿಯಲ್ಲೊಂದು ರಾಜಕೀಯ ಪರಿಷತ್ತು ಕೂಡಿತ್ತು. ಅಂದಿನ "ಕರ್ನಾಟಕದ ಸಂಹ" ದೇಶಪಾಂಡೆ ಗಂಗಾಧರರಾಯರು– ಮಾತನಾಡುತ್ತ ನನ್ನಲ್ಲಿ ಕನ್ನಡ–ಕರ್ನಾಟಕದ ಸ್ಫೂರ್ತಿ ತುಂಬಿದವ ಸಣ್ಣ ಬಾಲಕ. ಅವನ ಹಾಡುಗಳನ್ನು ಕೇಳಿ, ನನ್ನಲ್ಲಿ ಕನ್ನಡ ಹಾಗೂ ಕರ್ನಾಟಕದ ಅಭಿಮಾನ ಜಾಗೃತವಾಯಿತು. ಆ ಬಾಲಕ- "ಬೆಟಗೇರಿ ಕೃಷ್ಣಶರ್ಮ"– ಎಂದು ಹೇಳಿದರಂತೆ.

——

'ರತ್ನಾಶಾಸ್ತ್ರಿ', ಬೆಳಗಾವಿ

# ಡಾ. ಬೆಟಗೇರಿ-ನಾನು ಕಂಡಂತೆ

೧

ಸುಮಾರು ಮೂವತ್ತೆರಡು ವರ್ಷಗಳ ಹಿಂದೆ ನಾನು ಪುಣೆಯಲ್ಲಿದ್ದೆನು. ಪುಣೆ ಮರಾಠಿಸಾಹಿತ್ಯ, ಸಂಸ್ಕೃತಿಗಳ ನಾಡು! ಕಲೆ, ಪರಂಪರೆಗಳ ಬೀಡು! ಮಹಾರಾಷ್ಟ್ರದ ಹೃದಯ! ಈ ಪಟ್ಟಣದಲ್ಲಿ ಸುಸಂಸ್ಕೃತ ಜನರು ಹೆಚ್ಚಾಗಿ ವಾಸಿಸುತ್ತಾರೆ. ಅನೇಕ ಸರಸ್ವತಿಯ ಭಕ್ತರು, ಕಲಾರಾಧಕರು, ರಾಜಕಾರಣಿಗಳು ಮತ್ತು ವಿವಿಧಮುಖ ಪಂಡಿತರು ಈ ಪುಣ್ಯದಲ್ಲಿ ನೆಲಸಿದ್ದಾರೆ. ಬಹುಸಂಖ್ಯ ನಾಗರಿಕರು ರಸಿಕರು. ಪ್ರತಿದಿನ ಈ ಶಹರದಲ್ಲಿ ನಾಟಕ, ಸಂಗೀತ ಕಚೇರಿಗಳು ನಡೆಯುತ್ತವೆ. ಭಾಷಣ–ಪ್ರವಚನಗಳು ಕೇಳಲಿರುತ್ತವೆ. ಪುಣೆಯ ಜನಪದ ಜೀವನವು ಜೀವಕಳೆ ತುಂಬಿ ಶೋಭಿಸುವದು. ಈ ಶಹರದಲ್ಲಿ ಪಂಡಿತರಿಗೆ ಬೆಲೆಯಿದೆ. ಕಲಾವಿದರಿಗೆ ಪ್ರೋತ್ಸಾಹವಿದೆ. ಪಂಡಿತರ ಗುಂಪು ಪ್ರತಿಯೊಂದು ಕ್ಷೇತ್ರದಲ್ಲಿ ಕಾರ್ಯನಿರತವಾಗಿರುವದರಿಂದ ಎಲ್ಲ ಕ್ಷೇತ್ರಗಳು ಪ್ರಗತಿ ಪಥದಲ್ಲಿರುವವು.

ಕಳೆದ ಅನೇಕ ವರ್ಷಗಳಿಂದ ಪುಣೆಶಹರದಲ್ಲಿ 'ಕನ್ನಡ ಸಂಘವು' ತನ್ನ ಚಟುವಟಿಕೆಗಳನ್ನು ನಡೆಯಿಸಿಕೊಂಡು ಬಂದಿದೆ. ಆಗ ಈ ಸಂಘವು ಬುಧವಾರ ಪೇಠದಲ್ಲಿದ್ದಿತು. ಪ್ರತಿದಿನ ಹತ್ತಿಪ್ಪತ್ತು ಕನ್ನಡಿಗರೂ ತಪ್ಪದೆ ಸಂಘಕ್ಕೆ ಬರುತ್ತಿದ್ದರು. ಅವರಲ್ಲಿ 'ಶ್ರೀರಂಗ'ರ ಭಕ್ತರ ಗುಂಪೊಂದಿತ್ತು. ಶ್ರೀಸಾವಕಾರ, ಎಸ್. ಎನ್. ಕುಲಕರ್ಣಿ ಮತ್ತು ಆರಬಟ್ಟಿ ಇವರು ಈ ಗುಂಪಿನಲ್ಲಿ ಪ್ರಮುಖರು. ಇವರು ಪ್ರತಿವರ್ಷ ಶ್ರೀರಂಗರ ಒಂದು ನಾಟಕವನು ರಂಗಭೂಮಿಯ ಮೇಲೆ ತರುತ್ತಿದ್ದರು. ಈ ಗುಂಪು ಉಳಿದ ಲೇಖಕರ ನಾಟಕಗಳನ್ನು ರಂಗಭೂಮಿಯ ಮೇಲೆ ತರುತ್ತಿದ್ದಿಲ್ಲ. ಮತ್ತು ಉಳಿದ ನಾಟಕಗಳಲ್ಲಿ ಭಾಗವಹಿಸುತ್ತಿದ್ದಿಲ್ಲ. ಇದು ಅನೇಕರಿಗೆ ಸರಿಬರುತ್ತಿದ್ದಿಲ್ಲ.

ಕನ್ನಡ ಸಂಘದಲ್ಲಿ ನಾಟ್ಯಪ್ರೇಮಿಗಳ ಇನ್ನೊಂದು ಗುಂಪಿದ್ದಿತು. ಇವರಲ್ಲಿ ಶ್ರೀ ಕೌಲಗಿ, ಅನಂತರಾವ ಜಲವಾದಿ, ನಾನು ಮತ್ತು ಕೊಲ್ಹಾರ ಮೊದಲಾದವರಿದ್ದೆವು. ನಾವು ಪ್ರಸಂಗೋಪಾಲ್ ಏಕಾಂಕಗಳನ್ನು ಮಾಡುತ್ತಿದ್ದೆವು. ಶ್ರೀರಂಗರ ಭಕ್ತರೂ ತಾವು ಶ್ರೇಷ್ಠ ಕಲಾವಿದರೆಂದು ಬಗೆದಿದ್ದರು. ನಮ್ಮ ಗುಂಪಿನವರು ಅವರಿಗೆ ಯಾವ ದೃಷ್ಟಿಯಲ್ಲಿಯೂ ಕಡಿಮೆಯಿರಲಿಲ್ಲ. ಶ್ರೇಷ್ಠಾಶ್ರೇಷ್ಠತೆಯ ಮೂಲಕ ಇವೆರಡು ಗುಂಪುಗಳು ಒಂದುಗೂಡಿ ಯಾವ ನಾಟಕವನ್ನೂ ಮಾಡಿರಲಿಲ್ಲ.

ಒಮ್ಮೆ ನಾಡಹಬ್ಬದ ಸಭೆಯಲ್ಲಿ ನಾಟಕದ ಪ್ರಶ್ನೆ ಚರ್ಚೆಗೆ ಬಂದಿತು. ಶ್ರೀ ರಂಗರ ಭಕ್ತರು ತಾವು ನಾಟಕ ಮಾಡುವದಿಲ್ಲವೆಂದು ಹೇಳಿದರು. ನಮ್ಮ ಗುಂಪಿನ ಜಲುವಾದಿಯವರು ನಾಟಕ ಮಾಡುವ ಆಹ್ವಾನವನ್ನು ಸ್ವೀಕರಿಸಿದರು. ಕಾರ್ಯಕಾರಿ ಸಮಿತಿಯವರು ನಾಟಕದ ಹೊಣೆಗಾರಿಕೆಯನ್ನು ಅನಂತರಾವ ಜಲವಾದಿ ಅವರಿಗೆ ಒಪ್ಪಿಸಿದರು. ಅನಂತರಾಯರ ಸಲಹೆಸೂಚನೆಯ ಮೇರೆಗೆ ನಾವು ದಿ. ಶ್ರೀ ಗರುಡ ಸದಾಶಿವರಾಯರ 'ಎಚ್ಚಮ ನಾಯಕ' ಈ ಐತಿಹಾಸಿಕ ನಾಟಕವನ್ನು ರಂಗಭೂಮಿಯ ಮೇಲೆ ತರುವದನ್ನು ನಿರ್ಧರಿಸಿದೆವು. ಶ್ರೀ ಕೌಲಗಿಯವರು ಸಂಗೀತ ದಿಗ್ದರ್ಶಕರಾದರು. ನಾಟಕದ ದಿಗ್ದರ್ಶನದ ಹೊಣೆಗಾರಿಕೆಯು ನನ್ನ ಪಾಲಿಗೆ ಬಂದಿತು. ಅನಂತರಾಯರು ಎಚ್ಚಮ ನಾಯಕನ ಪಾತ್ರವನ್ನು ಅಭಿನಯಿಸುವದರ ನಿರ್ಧಾರವೂ ಆಯಿತು.

ಎರಡು ವರ್ಷಗಳ ಹಿಂದೆ ಶ್ರೀ ಬಿ.ಎಂ. ಶ್ರೀಕಂಠಯ್ಯನವರು ಪುಣೆಯ ನಾಡಹಬ್ಬದುತ್ಸವಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಆ ವರ್ಷದ ಕಾರ್ಯಕ್ರಮವು ಲಕ್ಷ್ಮೀ ಬೀದಿಯಲ್ಲಿರುವ 'ಗೋಖಲೆ ಹಾಲ್'ದಲ್ಲಿ ಸಾಂಗಗೊಂಡಿದ್ದಿತು. ಈ ಸಾರೆ ಶ್ರೀ ಬೆಟಗೇರಿ ಕೃಷ್ಣಶರ್ಮರು ಆಗಮಿಸುವವರಿದ್ದರು. ಶ್ರೀ ಯುತರು ಯಾವುದೇ ಅಟ್ಟಹಾಸವನ್ನು ತೋರ್ಪಡಿಸದೆ ಸಮಾರಂಭಕ್ಕೆ ಬರಲು ಸಮ್ಮತಿಸಿದ್ದರು. ಈ ಸಂಗ ತಿಯು ನಡೆದುಹೋದುದು ಕ್ರಿ.ಶ. ೧೯೪೪ನೆಯ ವರ್ಷ.

ನಾವೆಲ್ಲರೂ ಶ್ರೀ ಬೆಟಗೇರಿಯವರನ್ನು ಬರಮಾಡಿ ಕೊಳ್ಳಲು ರೈಲು ನಿಲ್ದಾಣಕ್ಕೆ ಹೋಗಿದ್ದೆವು. ಶ್ರೀ ಯುತರು ಮೇಲುನಗೆಯನ್ನು ಬೀರುತ್ತ ರೈಲಿನಿಂದ ಕೆಳ ಗಿಳಿದರು. ಸಂಘದ ಅಧ್ಯಕ್ಷರು ಮುಂದೆ ಹೋಗಿ ಶ್ರೀ ಬೆಟಗೇರಿಯವರಿಗೆ ಮಾಲಾರ್ಪಣೆ ಮಾಡಿ ಸ್ವಾಗತ ಬಯ ಸಿದರು. ಶ್ರೀ ಬೆಟಗೇರಿಯವರು ಕುತೂಹಲಪೂರಿತ ದೃಷ್ಟಿಯಿಂದ ನಮ್ಮೆಲ್ಲರ ಕಡೆಗೆ ನೋಡಿದರು.

ನಾನು ಶ್ರೀ ಬೆಟಗೇರಿಯವರನ್ನು ಪ್ರಥಮ ಬಾರಿ ನೋಡಿದ ದಿನವದು. ಅಂದಿನ ದಿನ ಶ್ರೀ ಬೆಟಗೇರಿ ಯವರು ಕಪ್ಪಾದ ಕೇಶರಾಶಿಯನ್ನು ದ್ವಿಭಾಗಿಸಿ ಬಾಚಿ ಕೊಂಡಿದ್ದರು. ಪಾಂಡಿತ್ಯದ ಪ್ರತೀಕವಾದ ಭಾಲಪ್ರದೇಶ ದಲ್ಲಿ ಅಕ್ಷಂತಿಯ ತಿಲಕವು ಶೋಭಿಸುತ್ತಿದ್ದಿತು. ವಕ್ರ ವಾದ ಹುಬ್ಬುಗಳು ವಜ್ರದಂತೆ ಹೊಳೆಯುವ ಕಣ್ಣು ಗಳಿಗೆ ಸತ್ತಿಗೆಯನ್ನು ಹಿಡಿದಿದ್ದವು. ತುಂಬಿದ ಗಲ್ಲಗಳು ಮುಖಕ್ಕೊಂದು ಬಗೆಯ ಮೆರಗನ್ನು ತಂದುಕೊಟ್ಟಿ ದ್ದವು. ನಿಡಿದಾದ ಮೂಗು ಮುಖಕ್ಕೊಂದು ರೀತಿಯ ಗಾಂಭೀರ್ಯವನ್ನು ತಂದುಕೊಡಲು ಪ್ರಯತ್ನಿಸುತ್ತಿ ದ್ದಿತು. ತುಟಿಯ ಕುಡಿಯಲ್ಲಿ ಶಾಶ್ವತವಾಗಿ ನೆಲಸಿದ ಮೆಲುನಗೆ–ಉಳಿದಾದ ಭಾವಗಳಿಗೆ ಮೊಗದಲ್ಲಿ ಸ್ಥಾನ ವನ್ನು ಕಲ್ಪಿಸಿಕೊಡುತ್ತಿದ್ದಿಲ್ಲ.

ಆ ದಿನ ಬೆಟಗೇರಿಯವರು ಖಾದಿ ಉಡುಪನ್ನು ಧರಿಸಿದ್ದರು. ಅವರು ಗಾಂಧೀಜಿಯವರ ಪರಮಭಕ್ತರು. ಅವರು ತೊಟ್ಟ ಖಾದಿ ನಿಲುವಂಗಿಯು ಎತ್ತರವಾದ ದೇಹಾಕೃತಿಗೊಂದು ಆಕರ್ಷಣೆಯನ್ನು ತಂದು ಕೊಟ್ಟಿ ದ್ದಿತು. ಪಾದಗಳವರೆಗೆ ಇಳಿದು ಬಂದ ಧೋತರ ಅವರ ಶರೀರದ ಕಟ್ಟಿನ ಸೊಬಗನ್ನು ಸಂವರ್ಧಿಸುತ್ತಿದ್ದಿತು. ಆಗ ಶ್ರೀ ಬೆಟಗೇರಿಯವರ ಪ್ರಾಯ ನಾಲ್ವತ್ತು ವರ್ಷಗಳ ಷ್ಟಾಗಿರಬಹುದು. ಅವರ ಎಡಭುಜದ ಮೇಲಿರುವ ಖಾದಿಯ ಶಾಲು, ಹರವಾದ ಎದೆಯ ಮೇಲೆ ನೇತಾ ಡುವ ಹೂಮಾಲೆಗಳು ಪಾಂಡಿತ್ಯದಿಂದ ಬೆಳಗುವ ಬೆಟ ಗೇರಿಯವರ ವದನಾರವಿಂದಕ್ಕೆ ತಮ್ಮ ಕಾಣಿಕೆಯನ್ನು ಸಮರ್ಪಿಸುತ್ತಿದ್ದವು. ಅಂದು ನಾನು ಆ ಸರಸ್ವತಿಯ ಪುತ್ರನನ್ನು ಕಣ್ಣು ತಣಿಯುವವರೆಗೆ– ಮನಸ್ಸು ತಣಿ ಯುವವರಿಗೆ ನೋಡಿದೆನು.

ಒಂದೇ ಒಂದು ದಿನ ನಾಡಹಬ್ಬವನ್ನಾಚರಿಸುವ ಪದ್ಧತಿ ಪುಣೆಯ ಕನ್ನಡಿಗರಲ್ಲಿದ್ದಿತು. ನಾಡಹಬ್ಬದ ಮುಂಜಾನೆಯ ಎಲ್ಲ ಕಾರ್ಯಕ್ರಮಗಳು ವಿಜೃಂಭಣೆ ಯಿಂದ ಸಾಂಗಗೊಂಡವು. ಅಂದು ಶ್ರೀ ಬೆಟಗೇರಿ ಯವರು, ಪಾಂಡಿತ್ಯ ಪೂರ್ಣವಾಗಿ ಮಾತಾಡಿದರು. ಪುಣೆಯ ಕನ್ನಡಿಗರು ಶ್ರೀ ಬೆಟಗೇರಿಯವರ ಭಾಷಣವನ್ನು ಮೆಚ್ಚಿ ಸ್ತುತಿಸಿದರು.

ರಾತ್ರಿ ಒಂಬತ್ತು ಗಂಟೆಗೆ ನಾಟಕವಿದ್ದಿತು. ನಾನು ನಾಟಕದ ಸಿದ್ಧತೆಯಲ್ಲಿದ್ದೆನು. ಪಾತ್ರಧಾರಿಯೊಬ್ಬರು ಹಠಾತ್ತಾಗಿ ಕಾಹಿಲೆಗೆ ತುತ್ತಾದ್ದರಿಂದ–ಅವರ ಪಾತ್ರ ವನ್ನು ಅಭಿನಯಿಸುವ ಹೊಣೆಗಾರಿಕೆ ನನ್ನ ಪಾಲಿಗೆ ಬಂದಿದ್ದಿತು.

ನಾಟಕವು ಸಮಯಕ್ಕೆ ಸರಿಯಾಗಿ ಆರಂಭವಾಯಿತು. ಮರಾಠಿಗಳು ಬಹುಸಂಖ್ಯೆಯಲ್ಲಿ ನಮ್ಮ ನಾಟಕವನ್ನು ನೋಡಲು ಬಂದಿದ್ದರು. ನಾಟಕವು ಯಶಸ್ವಿಯಾಗಿ ಕೊನೆಗೊಂಡಿತಾದರೂ ಶ್ರೀ ಬೆಟಗೇರಿಯವರು ಪಾತ್ರ ಗಳ ವೇಷ–ಭೂಷಣಗಳ ಬಗ್ಗೆ ನಮ್ಮನ್ನು ತರಾಟೆಗೆಳೆ ದರು. ಅವರಿತ್ತ ಸಲಹೆ–ಸೂಚನೆಗಳು ಮೌಲಿಕವಾಗಿ ದ್ದವು. ನಾವು ಅಭಿನಯ, ಸಂಗೀತಗಳ ಪ್ರಶಂಸೆಗೆ ಪಾತ್ರ ರಾದೆವು.

ಮರುದಿನ ನಾನು ಶ್ರೀ ಬೆಟಗೇರಿಯವರಿಗೆ— ಭೆಟ್ಟಿ ಯಾಗಲು ಹೋದೆನು. ಆ ಸಮಯದಲ್ಲಿ ನಾನೋರ್ವ ಉದಯೋನ್ಮುಖ ಲೇಖಕನಾಗಿದ್ದೆನು. ಕೆಲವು ಪತ್ರಿಕೆ

ಗಳಲ್ಲಿ ನನ್ನ ಹತ್ತಿಪ್ಪತ್ತು ಕತೆಗಳು ಅಚ್ಚಾಗಿದ್ದವು. ಶ್ರೀ ಬೆಟಗೇರಿಯವರು ನನ್ನ ಪರಿಚಯವನ್ನು ಮಾಡಿಕೊಂಡ ನಂತರ ಅಂದರು.

"ಏಕೆ ಬಂದಿದ್ದಿರಿ ?"

"ನಾನು ನಿಮ್ಮ ರಾಜಯೋಗಿ ಕಾದಂಬರಿಯನ್ನು ರಂಗಭೂಮಿಗೆ ಪರಿವರ್ತಿಸಿದ್ದೇನೆ."

'ಹೀಗೇನು ?'

—ಶ್ರೀ ಬೆಟಗೇರಿಯವರ ಮುಖದಿಂದ-ಆಶ್ಚರ್ಯದ ಉದ್ಗಾರವು ಹೊರಟಿತು.

'ಅಹುದು. ತಮಗೆ ನಾಟಕವನ್ನು ತೋರಿಸಲೆಂದು ತಂದಿದ್ದೇನೆ.'

—ನಾನು ಹಸ್ತಪ್ರತಿಯನ್ನು ಬೆಟಗೇರಿಯವರ ಕೈಗಿರಿಸುತ್ತಿದ್ದಂತೆ ಅಂದೆನು.

ಶ್ರೀ ಬೆಟಗೇರಿಯವರು ಹಸ್ತಪ್ರತಿಯ ಅವಲೋಕನದ ನಂತರ ಅಂದರು—

"ನಾನು ಈ ಹಸ್ತಪ್ರತಿಯನ್ನು ತೆಗೆದುಕೊಂಡು ಹೋಗುತ್ತೇನೆ. ಆಮೇಲೆ ಇದರ ಬಗ್ಗೆ ಬರೆಯುತ್ತೇನೆ."

ನಾನು ಹರ್ಷಭರಿತನಾಗಿ ಮನೆಗೆ ಮರಳಿದೆನು.

ವರ್ಷದ ಕಾಲಾವಧಿಯ ಮೇಲೆ ಸುಪ್ರಸಿದ್ಧ ಸಂಗೀತಗಾರರಾದ ಶ್ರೀ ಭೀಮಸೇನ ಜೋಶಿಯವರ ಸಂಗಡ ನಾಟಕದ ಪ್ರತಿಯನ್ನು ಉತ್ತಮ ಅಭಿಪ್ರಾಯದೊಂದಿಗೆ ನನಗೆ ತಿರುಗಿ ಕಳಿಸಿಕೊಟ್ಟರು.

೨

ನಾನು ಕ್ರಿ. ಶ. ೧೯೫೨ ರಲ್ಲಿ ಪುಣೆಯನ್ನು ಬಿಟ್ಟು ಬೆಳಗಾವಿಗೆ ಬಂದು ನೆಲೆಸಿದೆನು. ನಾನು ಕನ್ನಡ ನಾಡಿನಲ್ಲಿ ಕನ್ನಡ ವಾತಾವರಣದಲ್ಲಿ ಉಸಿರಾಡಿಸಲು ಹತ್ತಿದ್ದರಿಂದ ನನ್ನ ಬರವಣಿಗೆಯು ಚುರುಕುಗೊಂಡಿತು. ಬೆಳಗಾವಿಗೆ ಬಂದನಂತರ ನನ್ನ ಮತ್ತು ಶ್ರೀ ಬೆಟಗೇರಿಯವರ ಪರಿಚಯವು ಬೆಳೆದುಕೊಂಡು ಬಂದಿತು. ಭೆಟ್ಟಿಯ ಸಮಯದಲ್ಲಿ ನಾನೇ ಅವರಿಂದ ಪಡೆದ ಅನೇಕ ಸಲಹೆ ಸೂಚನೆಗಳು ನನ್ನ ಬರೆಹಕ್ಕೆ ನವ್ಯಚೇತನ, ಪ್ರೇರಣೆ, ದೃಷ್ಟಿಕೋನ ಮತ್ತು ಅಭಿವ್ಯಕ್ತಿಯನ್ನು ತಂದುಕೊಟ್ಟವು. ಶ್ರೀಯುತರ ಸಾಹಿತ್ಯವೂ ನನಗೆ ಮಾರ್ಗದರ್ಶನವನ್ನಿತ್ತಿತು.

ಶ್ರೀ ಬೆಟಗೇರಿ ಕೃಷ್ಣಶರ್ಮರ ಪಾಂಡಿತ್ಯ ಪೂರ್ಣ ಬರವಣಿಗೆಯು ಕನ್ನಡ ಸಾಹಿತ್ಯದಲ್ಲಿ ಶುಚಿ-ರುಚಿಗಳನ್ನು ಹುಟ್ಟಿಸಿತು. ಅವರ ಯಾವುದೇ ಕೃತಿಯು ಪ್ರತಿಭಾ ಪಾಂಡಿತ್ಯಗಳ ದ್ಯೋತಕವಾಗಿದೆ. ಶ್ರೀಯುತರ ಭಾಷೆಯು ವೈಶಿಷ್ಟ್ಯಪೂರ್ಣವಾಗಿರುವದು. ಇದು ಕನ್ನಡದ ಸತ್ವದಿಂದ ಹುಟ್ಟಿರುವವರಿಂದ ಶಕ್ತಿಸಂಪನ್ನವಾಗಿರುವದು. ಮತ್ತು ಓದುಗರ ಮನಸ್ಸಿನ ಮೇಲೆ ಪ್ರಭಾವವನ್ನು ಬೀರುವದು. ಈ ಭಾಷೆಗೆ ಆಂಗ್ಲ ಸಾಹಿತ್ಯದ ಮೈಲಿಗೆ. ತಾಗಿಲ್ಲ ಆದ್ದರಿಂದ ಶೈಲಿಯು ಪ್ರಗಲ್ಭ ಹಾಗೂ ಸರಸ-ಸುಂದರವಾಗಿರುವದು. ಈ ಭಾಷೆಯು ಕೇಳುಗರಿಗೆ ಸಂತೃಪ್ತಿ ಓದುಗರಿಗೆ ವೃತ್ತಿಯನ್ನು ಕೊಡುವದು ಪ್ರಾಂತಕ್ಕೊಂದು ಭಾಷೆಯಾಗಬೇಕೆಂದು ಹಂಬಲಿಸುವವರು ಬೆಟಗೇರಿಯವರ ಭಾಷೆಯಿಂದ ತೃಪ್ತಿ ಹೊಂದದಿರಲಾರರು.

ಶ್ರೀ ಕೃಷ್ಣಶರ್ಮರ ಭಾಷೆ ದೇಸಿ ಪದ್ಧತಿಯದು. ದೇಸಿಯ ಮೆರಗು ಇವರ ಭಾಷೆಯಲ್ಲಿ ಹಾಸುಹೊಕ್ಕಾಗಿದೆ. ಕನ್ನಡದಲ್ಲಿ ಚಿಂತನ ಮನನಮಾಡಿ ಕನ್ನಡದಲ್ಲಿಯೇ ಬರೆಯುವ ಸಿದ್ಧಹಸ್ತ ಬೆಟಗೇರಿಯವರದು. ಆಂಗ್ಲ ಭಾಷೆಯ ಅನುಕರಣೆಯಿಂದ ಹುಟ್ಟಿದ ಕನ್ನಡವು-ಬೆಟಗೇರಿಯವರ ಮೆರಗನ್ನು ಪಡೆಯಲಾರದು. ಶ್ರೀ ವಿ. ಕೃ. ಗೋಕಾಕರು ಬೆಟಗೇರಿಯವರ ಗದ್ಯವನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. (ಕ್ರಿ. ಶ. ೧೯೩೩ ರಲ್ಲಿ ಪ್ರಕಟವಾದ ಸುದರ್ಶನ ಕಾದಂಬರಿಯ ಮುನ್ನುಡಿ-) ಶ್ರೀ ಬೆಟಗೇರಿಯವರ ಗದ್ಯ ಶೈಲಿಯನ್ನು ಮೀರಿಸುವ ಗದ್ಯಶೈಲಿಯು ಇನ್ನೂ ಜನ್ಮತಾಳಿಲ್ಲವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಶ್ರೀಯುತರ ಶೈಲಿಯಲ್ಲಿ ಅಗ್ನಿಯ ದಾಹಕತೆಯಿದೆ, ಮರೀಚಿಯ ಮೋಹಕತೆಯಿದೆ. ಮಳೆಬಿಲ್ಲಿನ ಸೌಂದರ್ಯವಿದೆ, ಸಪ್ತಸ್ವರಗಳ ಏಕರೂಪತೆಯ ಮಾಧುರ್ಯವಿದೆ. ಶ್ರೀಗಂಧದ ಗಂಧವಿದೆ, ಹೂವುಗಳ ಕೋಮಲತೆಯಿದೆ., ಸಕ್ಕರೆಯ ಸವಿಯಿದೆ, ಕವಿ ಹೃದಯದ ಸಹೃದಯತೆಯಿದೆ, ಕನ್ನಡ ನುಡಿಯ ಕೆಚ್ಚಿದೆ. ಜೀವನದ ಅನುಭವ ಚಿಂತನ ಮತ್ತು ಪಾಂಡಿತ್ಯ ಪ್ರತಿಭೆಗಳ ಮಧುರ ಸಂಗಮವಿದೆ. ಮೇಘ ಗರ್ಜನೆಯಿದೆ., ಮಿಂಚಿನ ಚಪಲತೆಯಿದೆ, ಕನ್ನಡ ಸಂಸ್ಕೃತಿಯು ಸಾಕಾರಗೊಂಡಿದೆ. ಕನ್ನಡ ಮಣ್ಣಿನ ವಾಸನೆ

ಯಿದೆ, ನೀರಿನ ಸತ್ವವಿದೆ. ಇವೆಲ್ಲವುಗಳ ಸಾಕಾರ ಮೂರ್ತಿಯೆಂದರೆ ಶ್ರೀ ಕೃಷ್ಣಶರ್ಮರು.

'ಪದ್ಯಂ ವದ್ಯಂ; ಗದ್ಯಂ ಹೃದ್ಯಂ !' ಎಂದು ಉಸುರಿದ ಕವಿ ಮುದ್ದಣ್ಣನ ವಾಣಿಯು ಬೆಟಗೇರಿಯವರ ಗದ್ಯಶೈಲಿಯಲ್ಲಿ ಸಾಕಾರಗೊಂಡಿದೆ. ನಾನು ಶ್ರೀ ಬೆಟಗೇರಿಯವರ ಸುದರ್ಶನ, ರಾಜಯೋಗಿ, ಅಶಾಂತಿ ಪರ್ವ, ಮಲ್ಲಿಕಾರ್ಜುನ ಮೊದಲಾದ ಕಾದಂಬರಿಗಳನ್ನು ಓದಿದ್ದೇನೆ. ಈ ಕಾದಂಬರಿಗಳು ನನ್ನ ಮನಸ್ಸಿನ ಮೇಲೆ ಬೀರಿದಷ್ಟು ಪ್ರಭಾವವನ್ನು ಉಳಿದಾದ ಕಾದಂಬರಿಗಳು ಬೀರಿಲ್ಲ. ಶ್ರೀ ಬೆಟಗೇರಿಯವರ ಗದ್ಯವು 'ಅಶಾಂತಿ ಪರ್ವ' ಕಾದಂಬರಿಯಲ್ಲಿ ಗರಿಗೆದರಿ ಮಯೂರದಂತೆ ಕುಣಿಯುತ್ತಿದೆ. ಈ ಕಾದಂಬರಿಯು ಭಾರತೀಯ ಭಾಷೆಗಳಲ್ಲಿಯ ಅತ್ಯುತ್ತಮ ಕಾದಂಬರಿಯೆಂದು ಪರಿಗಣಿಸಲ್ಪಟ್ಟಿವೆ.

ಕಾದಂಬರಿಯೆಂದರೆ ವೃತ್ತ ಪತ್ರವಲ್ಲ ! ಅದೊಂದು ನವ್ಯಕಾವ್ಯ ಕತೆಯು ಖಂಡ ಕಾವ್ಯವಾದರೆ ಕಾದಂಬರಿಯು ಮಹಾಕಾವ್ಯ. ಕಾದಂಬರಿಯು ಮಹಾಕಾವ್ಯದ ಲಕ್ಷಣಗಳಿಂದ ಜಡಿತವಾಗಿರಬೇಕು. ಕವಿಯು ತನ್ನ ವಿಚಾರಗಳನ್ನು, ಅನುಭವಗಳನ್ನು ಪದ್ಯಕ್ಕಿಂತ ಗದ್ಯದಲ್ಲಿ ಹೆಚ್ಚು ಹೆಚ್ಚು ಪ್ರಭಾವಕಾರಿಯಾಗಿ ಪ್ರಕಟಿಸಬಲ್ಲನೆಂದು ಬೆಟಗೇರಿಯವರು ಅಭಿಪ್ರಾಯ ಪಡುತ್ತಾರೆ. ಅಲ್ಲದೆ ಕವಿಯ ಅಭಿವ್ಯಕ್ತಿಗೆ ಪದ್ಯಕ್ಕಿಂತ ಗದ್ಯವೆ ರಾಜಮಾರ್ಗವೆಂಬುದನ್ನು ನಾವು ಬೆಟಗೇರಿಯವರ ಕಾದಂಬರಿಗಳಿಂದ ಕಂಡುಕೊಳ್ಳಬಹುದು. ಆಂಗ್ಲ ಕಾದಂಬರಿಗಳ ಅನುಕರಣೆಯಿಂದ ಬರೆದ ಕಾದಂಬರಿಗಳು ಸತ್ವಹೀನವಾಗಿರುತ್ತವೆ.

ನಾನೂ ವರ್ಷದಲ್ಲಿ ನಾಲ್ಕೆಂಟು ಸಾರೆ ಶ್ರೀ ಬೆಟಗೇರಿಯವರಿಗೆ ಭೆಟ್ಟಿಯಾಗುವ ಪರಿಪಾಠವನ್ನಿಟ್ಟುಕೊಂಡಿದ್ದೇನೆ. ನಮ್ಮ ಭೆಟ್ಟಿಯು ಅವ್ಯಾಹತವಾಗಿ ಎರಡು-ಮೂರು ಗಂಟೆಗಳಕಾಲ ನಡೆಯುತ್ತದೆ. ನಾವು ಈ ಸಮಯದಲ್ಲಿ ಚರ್ಚೆ ಮಾಡುತ್ತೇವೆ. ನಾನು ನನ್ನ ಅನೇಕ ಸಂದೇಹ-ಸಮಸ್ಯೆಗಳ ಪರಿಹಾರವನ್ನು ಶ್ರೀ ಬೆಟಗೇರಿಯವರಿಂದ ಪಡೆಯುತ್ತೇನೆ. ನಾನು ಕ್ರಿ, ಶ. ೧೯೫೪ರಿಂದ ೧೯೫೮ ರ ಕಾಲಾವಧಿಯಲ್ಲಿ ನೂರಾರು ಕತೆಗಳನ್ನು ಬರೆದೆನು. ಆದರೆ ಯಾರೂ ನನ್ನ ಕತೆಗಳ ಬಗ್ಗೆ ಒಂದು ಅಕ್ಷರವನ್ನೂ ಬರೆಯಲಿಲ್ಲ. ಇದರಿಂದ ನಾನು ನಿರಾಶೆಗೊಂಡು ಬರೆಯುವದಕ್ಕೆ ಪೂರ್ಣವಿರಾಮವನ್ನು ಕೊಟ್ಟೆನು.

ಒಮ್ಮೆ ನಾನು ಬೆಟಗೇರಿಯವರಿಗೆ ಭೆಟ್ಟಿಯಾಗಲು ಹೋದಾಗ ಅವರು ಮಾತಿಗೆ ಮಾತು ಹೊರಟು ಅಂದರು

'ಯಾವ ಕಾದಂಬರಿಯನ್ನು ಬರೆಯುತ್ತಿರುವಿರಿ ?

'ಬರೆಯುವದನ್ನು ಬಿಟ್ಟಿದ್ದೇನೆ.'

—ಗಂಭೀರವಾಣಿಯಲ್ಲಿ ನಾನೆಂದೆ,

'ಏಕೆ ?'

"ನಾನು ಬರೆದ ಕತೆಗಳು ವಾಚಕರಿಗೆ ಸೇರುವದಿಲ್ಲ. ವಿಮರ್ಶಕರ ದೃಷ್ಟಿಯು ನನ್ನ ಕತೆಗಳೆಡೆಗೆ ಹರಿಯುವದಿಲ್ಲ. ಪರಿಣಾಮರೂಪವಾಗಿ ನಾನೋರ್ವ ಅಯಶಸ್ವಿ ಲೇಖಕನೆಂಬ ಮನೋಧಾರಣೆ ನನ್ನದಾಗಿದೆ. ಆದ್ದರಿಂದ......"

"ಬರೆಯುವದನ್ನು ಬಿಟ್ಟೆಯೇನು ?"

"ಅಹುದು"

"ಓದುಗರ ಕಣ್ಣುಗಳು ತೆರೆಯಬಹುದು. ಅವರು ನಿನ್ನ ಕತೆಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ಪ್ರಕಟಿಸಬಹುದು".

"ಓದುಗರ ಕಣ್ಣುಗಳು ತೆರೆವಾಗ ನಾನು ಕಣ್ಣುಗಳನ್ನು ಮುಚ್ಚಿರುತ್ತೇನೆ. ಮರಣೋತ್ತರ ಕೀರ್ತಿಯನ್ನು ಹೇಡಿಗಳು ಅಪೇಕ್ಷಿಸುತ್ತಾರೆ. ನನಗೆ ನನ್ನ ಕೀರ್ತಿ ಅಪಕೀರ್ತಿಗಳನ್ನು ಈ ಜನ್ಮದಲ್ಲಿಯೇ ನೋಡುವದಿದೆ."

'ನಿಮ್ಮ ಆತ್ಮವಿಶ್ವಾಸವು ಫಲಕಾರಿಯಾಗದಿರದು. ನೀವು ನಿರಾಶಾವಾದಿಗಳಾದರೆ ನಿಮ್ಮ ಮಹತ್ವಾಕಾಂಕ್ಷೆ ನೆರವೇರದು. ಮಾನವ ಯಾವಾಗಲೂ ಆಶಾವಾದಿಯಾಗಿರಬೇಕು. ಆಸೆ ಈಡೇರಲಿಲ್ಲವೆಂದು ನಿರಾಸೆಗೊಳ್ಳಬಾರದು.

—ಸಾಹಿತಿ ತಾನು ಬರೆದುದೆಲ್ಲ ಪ್ರಕಟವಾಗಬೇಕೆಂದು ಎಂದಿಗೂ ಇಚ್ಛಿಸಬಾರದು. ಏಕೆಂದರೆ ವರಕವಿಯೂ ಬರೆದ ಸಾಹಿತ್ಯವೆಲ್ಲ ಸುಂದರವಾಗಿರುವದಿಲ್ಲ.

—ಸೇವಾ ಭಾವದಿಂದ, ನಿರಪೇಕ್ಷ ಬುದ್ಧಿಯಿಂದ ಸಾಹಿತಿಯು ಸಾಹಿತ್ಯವನ್ನು ರಚಿಸಬೇಕು'

ನನಗೆ ಯಾವ ಪ್ರಶಸ್ತಿಯನ್ನು ಪಡೆಯುವ ಇಚ್ಛೆ ಯಿಲ್ಲ. ಆದರೆ ಗುಣ–ದೋಷಗಳನ್ನು ಅರಿತುಕೊಳ್ಳುವ ಇಚ್ಛೆಯಿದೆ.

'ಯಾವುದೆ ಸಾಹಿತಿ ಇಲ್ಲವೆ ವಿಮರ್ಶಕ ಈ ಕೆಲಸಗಳನ್ನು ಪ್ರಾಮಾಣಿಕತನದಿಂದ ಮಾಡುವದಿಲ್ಲ. ನಿನ್ನ ಸಾಧನೆ ಹೆಚ್ಚಿದಂತೆ ನಿನಗೆ ನಿನ್ನ ಅರಿವುಂಟಾಗುವದು ನಿನ್ನ ಅರಿವೆ ನಿನಗೆ ಗುರು! ನೀನು ಅನ್ಯ ಗುರುಗಳ ಬೆನ್ನು ಹತ್ತಬೇಡ.

—ಕೈಕೊಂಡಿರುವ ಸರಸ್ವತಿಯ ಸೇವೆಯನ್ನು ಬಿಡ ಬೇಡ. ಸೇವೆಯಲ್ಲಿಯೆ ನಿನಗೊಂದು ದಿನ ಸಾಕ್ಷಾತ್ಕಾರ ವಾಗುವದು."

"..........."

"ನೋಡು, ನಾನು ಬರೆದಿರುವ, ಅನೇಕ ಹೊತ್ತಿಗೆ ಗಳು ಮಂಚದ ಮೇಲೆ ಧೂಳು ತಿನ್ನುತ್ತ ಬಿದ್ದಿವೆ. ಯಾವದೆ ಪ್ರಕಾಶಕನು ಅವುಗಳ ಉದ್ಧಾರವನ್ನು ಮಾಡಲು ಸಿದ್ಧನಿಲ್ಲ. ನಾನೂ ಕೂಡ ಯಾವ ಪ್ರಕಾಶಕನಿಗೂ ಪ್ರಕ ಟಿಸಲು–ಕೇಳುವದಿಲ್ಲ. ಹೀಗಾದ ಮಾತ್ರಕ್ಕೆ ನಾನು ಬರೆ ಯುವದನ್ನು ಬಿಡಬೇಕೆ ?

—ಸಾಹಿತಿಯು ತಾನು ಬರೆದ ಸಾಹಿತ್ಯವನ್ನು ಹೊಟ್ಟೆಯ ಮಕ್ಕಳಂತೆ ಪ್ರೀತಿಸಬೇಕು. ಸುರೂಪ–ಕುರೂಪ ಜಾಣ–ಧಡ್ಡ ಮಕ್ಕಳನ್ನು ಒಂದೇ ಅಂತಃ ಕರಣದಿಂದ ಕಾಣುವಂತೆ ಕಾಣಬೇಕು.

—ಸಾಹಿತಿಯು ಸ್ವಾಭಿಮಾನಿಯಾಗಿರಬೇಕು. ಯಾವುದೆ ಸಂಪಾದಕನೆದುರು, ಪ್ರಕಾಶಕನೆದುರು ದೀನ ನಾಗಬೇಡ. ಪ್ರತಿಯೊಂದು ವಸ್ತುವಿಗೊಂದು ಕಾಲ ಬಂದೇ ಬರುವದು. ನಿನ್ನ ಸಾಹಿತ್ಯಕ್ಕೂ ಒಂದು ಕಾಲ ಕಾದಿದೆ.

—ನೀನು ಬರೆದ ಕತೆಗಳು ಒಳ್ಳೇಯವಿರಲಿ, ಇಲ್ಲ ದಿರಲಿ ಹಾಗು ಬರೆದಿದ್ದೆನೆಂದು ಹೆಮ್ಮೆ ತಾಳು. ಎರಡನೆ ಯವರ ಅಭಿಪ್ರಾಯಕ್ಕೆ ಕಿವಿಗೊಡಬೇಡ. ಬರೆ! ಹೊರೆ ಯಾಗುವಷ್ಟು ಬರೆ! ಈ ಹೊರೆಯಲ್ಲಿಂದಲೇ ಒಂದು ಉತ್ತಮ ರತ್ನವು ಹೊರಬರುವದು."

ನಾನು ಬೆಟಗೇರಿಯವರ ಮಾತುಗಳನ್ನು ಏಕಚಿತ್ತ ದಿಂದ ಕೇಳುತ್ತಿದ್ದೆನು. ಅವರ ವಿಚಾರಗಳು ನನ್ನ ಮನ ಸ್ಸಿನ ಮೇಲೆ ಗಾಢವಾದ ಪರಿಣಾಮವನ್ನು ಬೀರಿದವು.

ಶ್ರೀ ಬೆಟಗೇರಿಯವರು ಸ್ವಲ್ಪ ಕಾಲದ ಮೌನದ ನಂತರ ಮಾತಿಗಾರಂಭಿಸಿದರು.

...ಆದಿಕಾಲದಿಂದ ಸಾಹಿತ್ಯ ಕ್ಷೇತ್ರದಲ್ಲಿ ಗುಂಪು ಗಾರಿಕೆ, ಪಕ್ಷಪಾತತನಗಳು ಇದ್ದೇ ಇರುವವು. ಪರಿ ಣಾಮರೂಪವಾಗಿ ಒಳ್ಳೆಯ ಸಾಹಿತಿಗಳು ತೆರೆಯಮರೆ ಯಲ್ಲಿ ಉಳಿದರು.... ! ಬಹು ಜನ ಸಮಾಜವು ಸಾಹಿ ತ್ಯಿಕ ಮೌಲ್ಯಗಳನ್ನು ಯಾವ ಕಾಲದಲ್ಲಿಯೂ ಯಾವ ದೇಶದಲ್ಲಿಯೂ ಅರಿತಿರುವದಿಲ್ಲ. ಅರಿತವರು ಕೆಲವರು. ಅರಿತವರು ಗುಂಪುಕಟ್ಟಿಕೊಂಡು ಪಕ್ಷಪಾತತನವನ್ನು ಮಾಡುತ್ತಾರೆ. ಹೀಗೆ ಮಾಡಿದರೆ ಪ್ರತಿಭಾವಂತ ಕವಿಯ ಪ್ರತಿಭೆಯೆಂದಿಗೂ ಹಾಳಾಗುವದಿಲ್ಲ. ರತ್ನವು ಮಣ್ಣಿ ನಲ್ಲಿ ಬಿದ್ದರೇನಾಯಿತು. ಅದೆಂದಿಗೂ ಗಾಜಿನ ತುಂಡಾ ಗದು. ನಿನ್ನ ಸಾಹಿತ್ಯಕ್ಕೆ ಬೆಲೆ ಬರಲಿ ! ಬರದಿರಲಿ ! ನೀನು ಬರೆಯುವದನ್ನು ಬಿಡಬೇಡ.

"ಆದರೂ..."

"ನಾನು ಹೇಳಿದ್ದನ್ನು ಮಾಡು."

–ಶ್ರೀ ಬೆಟಗೇರಿ ಅವರು ಅಧಿಕಾರವಾಣಿಯಿಂದ ಅಂದರು.

ನಾನು ಬೆಟಗೇರಿಯವರ ಅಮೃತವಾಣಿಯನ್ನು ಕೇಳಿ ಬೆಳಗಾವಿಗೆ ಮರಳಿದೆನು. ಪುನಃ ಲೆಕ್ಕಣಿಕೆಯನ್ನು ಕೈಯಲ್ಲಿ ತೆಗೆದುಕೊಂಡು ನವ ಹುಮ್ಮಸದಿಂದ ಜಿದ್ದಿನಿಂದ ಬರೆಯಲಾರಂಭಿಸಿದೆನು.

೩

ಶ್ರೀ ಬೆಟಗೇರಿಯವರೂ ಕೆಚ್ಚೆದೆಯ ಕನ್ನಡಿಗರು. ಪರಕೀಯರ ಎಂಜಲವನ್ನು ತಿಂದು ಬದುಕುವ ಸಾಹಿತಿ ಗಳಲ್ಲ! ಕನ್ನಡಿಗರು ಬೆಟಗೇರಿಯವರ ಕನ್ನಡಾಭಿಮಾನ ವನ್ನು ಮೆಚ್ಚುತ್ತಾರೆ. ಅವರು ಬರೆದ ಸಾಹಿತ್ಯವನ್ನು ಓದಿ ಆನಂದಪಡುತ್ತಾರೆ. ಪರಕೀಯ ಭಾಷೆಗಳಲ್ಲಿಯ ಒಳ್ಳೆಯ ಸಂಗತಿಗಳು ನಮ್ಮ ಭಾಷೆಯಲ್ಲಿ ಬಂದರೆ ತಪ್ಪೇನೂ ಇಲ್ಲ. ಆದರೆ ಪರಕೀಯರ ಭಾಷೆ ನಮ್ಮ ಮೇಲೆ–ನಮ್ಮ ಸಾಹಿತ್ಯದ ಮೇಲೆ ತನ್ನ ಅಧಿಕಾರವನ್ನು ಪ್ರಸ್ಥಾಪಿಸಬಾರದು. ಜ್ಞಾನ ಎಲ್ಲ ಭಾಷೆಯ ಸಾಹಿತ್ಯ ಸಾಹಿತ್ಯದಲ್ಲಿ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಇದ್ದೇ ಇರು ವದು. ಕನ್ನಡ ಭಾಷೆ ಇದಕ್ಕೆ ಅಪವಾದವಾಗಿಲ್ಲ. ಕನ್ನಡ ಭಾಷೆ ಸಮೃದ್ಧವಾಗಿದೆ, ಸಂಪನ್ನವಾಗಿದೆ;

ಶ್ರೀಮಂತವಾಗಿದೆ. ಈ ಭಾಷೆಗೆ ಉಳಿದಾವ ಭಾಷೆಯ ಅನುಕರಣೆಯನ್ನು ಮಾಡುವ ಅವಶ್ಯಕತೆಯಿಲ್ಲ.

ಪರಕೀಯ ಭಾಷೆಯ ಗುಲಾಮರಾದ ನಮಗೆ ಇಂದು ಶುದ್ಧವಾದ ಕನ್ನಡ ಭಾಷೆಯನ್ನಾಡಲು ಬರುವ ದಿಲ್ಲ. ಬರೆಯಲು ಬರುವದಿಲ್ಲ. ಕನ್ನಡ ಭಾಷೆಯು ಅನೇಕ ಭಾಷೆಗಳ ಮಿಶ್ರಣವಾಗಿದೆ. ಆಂಗ್ಲಭಾಷೆಯು ಲ್ಯಾಟಿನ ಭಾಷೆಯ ಮೂಲಕ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವಂತೆ– ಕನ್ನಡ ಭಾಷೆಯು ಸಂಸ್ಕೃತಿ ಭಾಷೆಯ ಮೂಲಕ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಸಂಸ್ಕೃತ ಭಾಷೆಯನ್ನು ಬಿಟ್ಟು ಕನ್ನಡ ಭಾಷೆಯನ್ನಾಡುವ ಪಂಡಿತ ದೊರೆಯಲಾರನು.

ನವೋದಯ ಪದ್ಯ ಸಾಹಿತ್ಯ ಆಂಗ್ಲಭಾಷೆಯ ಅನುಕರಣೆಯಿಂದ ಹುಟ್ಟಿತು. 'ಶ್ರೀ'ಯವರು ಈ ಸಾಹಿತ್ಯದ ಪಿತಾಮಹರು. ನವೋದಯ ನವ್ಯಸಾಹಿತ್ಯವು ಸಂಸ್ಕೃತಿ ನಾಟಕಗಳ ಅನುವಾದದಿಂದ ಮತ್ತು ಬಂಗಾಲಿ, ಮರಾಠಿ ಕಾದಂಬರಿಗಳ ಅನುವಾದದಿಂದ ರೂಪುಗೊಂಡಿತು. ನವೋದಯ ಗದ್ಯಕ್ಕೆ ಶ್ರೀ ಬೆಟಗೇರಿಯವರು ಅಲಂಕಾರಗಳನ್ನು ತೊಡರಿಸಿ ಸಿಂಗರಿಸಿದರು. ನವೋದಯ ಕಾಲದ ಪದ್ಯ ಸಾಹಿತ್ಯವು ಅನುವಾದ, ಭಾವಾನುವಾದ ಮತ್ತು ಸ್ವೈರ ಅನುವಾದಗಳಿಂದ ಬೆಳೆದುಕೊಂಡು ಬಂದಿತು. ಆಂಗ್ಲ ಭಾಷೆಯನ್ನರಿಯದವರು ಇದನ್ನು ಪದ್ಯ ಸಾಹಿತ್ಯವೆಂದೇ ಬಗೆದರು. ತಾವು ಆರಂಭಿಸಿದ ಕಾರ್ಯವನ್ನು ಮುಂದೊರೆಯಿಸಿಕೊಂಡು ಹೋಗುವ ಶಿಷ್ಯವೃಂದವನ್ನು 'ಶ್ರಿ' ಯವರು ನಿರ್ಮಿಸಿದರು. ಆರಂಭದ ಸಾಹಿತ್ಯವು ಸತ್ವಹೀನ, ರಸಹೀನವಾಗಿದೆ– 'ಶ್ರಿ' ಯವರು ಅತಿಥಿಯಾಗಿ ಕರೆದುಕೊಂಡು ಬಂದ ಆಂಗ್ಲ ಸಾಹಿತ್ಯವಿಂದು ಕನ್ನಡಿಗರ ಮನೆ-ಮನಗಳ ಮೇಲೆ ತನ್ನ ಪ್ರಭುತ್ವವನ್ನು ಪ್ರಸ್ಥಾಪಿಸಿದೆ. ಕನ್ನಡ ಕವಿಗಳನ್ನು ಆಳುತ್ತಿದೆ. ಇದು ಕನ್ನಡ ಸಾಹಿತ್ಯದ, ಕನ್ನಡಿಗರ ಪ್ರಗತಿಯಾಗಿರದೆ ಅಧೋಗತಿಯಾಗಿದೆ. ನವೋದಯ ಸಾಹಿತ್ಯದ ಮೌಲ್ಯ ಮಾಪನ ಆಂಗ್ಲ ಸಾಹಿತ್ಯದ ಅಳತೆಗೋಲಿನಿಂದ ನಡೆದಿದೆ. ಇದೂ ಕನ್ನಡ ಸಾಹಿತ್ಯದ ನಿಜವಾದ ಮೌಲಮಾಪನವಲ್ಲ.

ನವೋದಯ ಸಾಹಿತ್ಯದ ಆರಂಭಕಾಲದಲ್ಲಿ ಮತ್ತು ನಂತರ ಕನ್ನಡದ ಸತ್ವವನ್ನು ಉಳಿಸಲು ಕರ್ನಾಟಕದ ಸಾಹಿತಿಗಳೂ ಪ್ರಯತ್ನಿಸಿದರು. ಅವರಲ್ಲಿ ಶ್ರೀ ಆಲೂರ ವೆಂಕಟರಾಯರೂ ಪ್ರಮುಖರು. ಶ್ರೀ ಬೆಟಗೇರಿಯವರು ಕನ್ನಡತನವನ್ನು ಬಿಡಲಿಲ್ಲ. ಶ್ರೀ ಬೇಂದ್ರೆ ದತ್ತರಾಯರು ಎರಡೂ ದಂಡೆಯ ಮೇಲೆ ಕೈಯಿರಿಸಿದರು. ಶ್ರೀ ಶ್ರೀಧರಖಾನೋಲಕರ, ಮಧುರಚೆನ್ನ ಮೊದಲಾದವರು ಕನ್ನಡದ ಉಳಿವಿಗಾಗಿ ಪ್ರಯತ್ನಿಸಿದರು. ಕ್ರಿ. ಶ. ೧೯೨೦ ರ ಸುಮಾರಿಗೆ ಸಾಮ್ಯವಾದದ ಗಾಳಿಯು ಈ ದೇಶದಲ್ಲಿ ಬೀಸತೊಡಗಿತು. ಅನೇಕ ತರುಣ ಸಾಹಿತಿಗಳು ಈ ಸುಳಿಗಾಳಿಯ ಸುಳಿಯಲ್ಲಿ ಸಿಕ್ಕುಬಿದ್ದರು. ಇವರು ನವ್ಯ – ಅತಿನವ್ಯ ಸಾಹಿತ್ಯಶಿಶುಗಳನ್ನು ಪಾಶ್ಚಿಮಾತ್ಯರಿಂದ ದತ್ತು ತೆಗೆದುಕೊಂಡರು. ಈ ಶಿಶುಗಳು ಭಾರತೀಯ ಸಾಹಿತಿಗಳ ರಕ್ತಮಾಂಸದಿಂದ ಹುಟ್ಟಿದ್ದರಿಂದ ಇವುಗಳ ಗುಣ_ರೂಪಗಳು ಬೇರೆಯಾಗಿರುವವು. ಈ ಶಿಶುಗಳೂ ಸುಂದರವಾಗಿದ್ದರೂ ಸತ್ವಹೀನ, ಗುಣಹೀನವಾಗಿರುವವು. ಇವುಗಳ ಸಂತಾನವು ಬೆಳೆದುಕೊಂಡು ಬಂದಿದೆ. ಆದರೆ ಈ ಸಂತಾನ ಅಲ್ಪಾಯುಷ್ಯದಿಂದ ಕೂಡಿರುವದು.

ಆಂಗ್ಲ ಸಾಹಿತ್ಯದ ಅನುಕರಣೆಯನ್ನು ಮಾಡುವ ಜನರು ಭಾರತದ ಇತರ ಪ್ರಾಂತಗಳಲ್ಲಿರುವಂತೆ ಕರ್ನಾಟಕದಲ್ಲಿಯೂ ಇರುವರು. ಈ ಜನರು ಕನ್ನಡ ಸಾಹಿತ್ಯದ ಅಭ್ಯಾಸವನ್ನು ಮಾಡದವರು ! ಕನ್ನಡದ ಸತ್ವವನ್ನು ಅರಿಯದವರು ! ಈ ಸುಶಿಕ್ಷಿತ ಗುಲಾಮರು ಕನ್ನಡ ಸಾಹಿತ್ಯ ಪರಂಪರೆಯನ್ನು ಮಣ್ಣುಗೂಡಿಸಿದರು. ನೂರಾರು ವರ್ಷಗಳಿಂದ ಹರಿದುಕೊಂಡು ಬಂದ ಕನ್ನಡ ಸಾಹಿತ್ಯವಾಹಿನಿಯು ಬತ್ತಿಹೋಯಿತು. ಇದರಲ್ಲಿಯೂ ಸ್ವಾತಂತ್ರ್ಯೋತ್ಸವದ ಕನ್ನಡದ ನವ್ಯ–ಅತಿನವ್ಯಸಾಹಿತ್ಯವು ಅರ್ಥಹೀನ–ಸತ್ವಹೀನವಾಗಿರುವದು. ನವ್ಯ–ಅತಿನವ್ಯ ಕಾವ್ಯವು ಬರೆದವರಿಗೆ ತಿಳಿಯುವದಿಲ್ಲ. ಸಾಮ್ಯವಾದಿಗಳು ನವ್ಯ–ಅತಿನವ್ಯ ಸಾಹಿತಿಗಳ ಸೋಗನ್ನು ಹಾಕಿಕೊಂಡು ಮನಭಿಪ್ರಾಯವಾಗಿ ಕುಣಿಯತೊಡಗಿದ್ದಾರೆ. ನವೋದಯ ಸಾಹಿತಿಗಳು ಆಂಗ್ಲಸಾಹಿತ್ಯದ ಅನುಕರಣೆಯನ್ನು ಮಾಡದೇ ಹೋಗಿದ್ದರೆ ಕನ್ನಡ ಸಾಹಿತ್ಯದ ಸಂಪೂರ್ಣ ಅಧೋಗತಿಯೆಂದಿಗೂ ಆಗುತ್ತಿದ್ದಿಲ್ಲ ಎಂದು ನಮ್ಮ ಭೆಟ್ಟಿಯಲ್ಲೊಮ್ಮೆ ನಾವು ಚರ್ಚಿಸಿದೆವು.

ಅನೇಕರು ಶ್ರೀ ಬೇಟಗೇರಿಯವರೂ ಆಂಗ್ಲ ಭಾಷೆ ಯನ್ನರಿಯರೆಂದು ಭಾವಿಸಿದ್ದಾರೆ. ಆದ್ದರಿಂದ ಅವರೂ ಶ್ರೇಷ್ಠದರ್ಜೆಯ ಸಾಹಿತ್ಯವೆಂದು ಪ್ರತಿಪಾದಿಸುವವರೂ ಇದ್ದಾರೆ. ಬೆಟಗೇರಿಯವರು ಆಂಗ್ಲ ಭಾಷೆಯ ಪ್ರಾಧ್ಯಾಪಕರಿಗಿಂತ ಸಮರ್ಪಕವಾಗಿ ಮಾತಾಡಬಲ್ಲರು. ಒಮ್ಮೆ ಕರ್ನಾಟಕ ವಿದ್ಯಾಪೀಠದ ಆಂಗ್ಲಭಾಷಾ ಪ್ರಾಧ್ಯಾಪಕರೊಬ್ಬರು ಪೀಠಗಳ ಬಗ್ಗೆ ಸಲ್ಲದ್ದನ್ನು ಮಾತಾಡಿದರು. ಅವರು ಪ್ರತಿಪಾದಿಸಿದ ಅನೇಕ ವಿಧಾನಗಳನ್ನು ಶ್ರೀ ಬೆಟಗೇರಿಯವರು ಆಂಗ್ಲ ಭಾಷೆಯಲ್ಲಿ ಖಂಡಿಸಿದರು. ಈ ಸಂಗತಿಯು ಅನೇಕ ಜನರಿಗೆ ಗೊತ್ತಿಲ್ಲ.

ಒಮ್ಮೆ ನಾನು ಬೆಟಗೇರಿಯವರಲ್ಲಿಗೆ ಹೋದಾಗ ನಮ್ಮ ಚರ್ಚೆಯು ಗಂಭೀರರೂಪವನ್ನು ತಾಳಿತು. ಜಾಜ್ವಲ್ಯ ಕನ್ನಡ ಅಭಿಮಾನದಿಂದ ಪ್ರೇರಿತರಾಗಿ ಶ್ರೀ ಬೆಟಗೇರಿಯವರು ಮಾತಾಡುತ್ತಿದ್ದರು.

"ಭಾರತೀಯರು ಆಂಗ್ಲರಿಗೆ ಈ ದೇಶದಲ್ಲಿ ನೆಲಿಸಲು ಅವಕಾಶಕೊಟ್ಟರು. ಆಂಗ್ಲರು ಭಾರತೀಯರ ಮೇಲೆ ಪ್ರಭುತ್ವ ಸಂಪಾದಿಸಿ ಈ ದೇಶವನ್ನಾಳಿದರು. ಭಾರತೀಯರು ಆಂಗ್ಲಸಾಹಿತ್ಯಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟರೆ ಕನ್ನಡ ಸಾಹಿತ್ಯವೆಲ್ಲ ಆಂಗ್ಲಮಯವಾಗುವದು. ಇಂದು ಆಂಗ್ಲ ಭಾಷೆ ನಮ್ಮ ಮನೆ-ಮನಗಳಲ್ಲಿ ಪ್ರವೇಶಿಸಿದೆ. ಕನ್ನಡಿಗರು ಈ ಮಾರಿಯನ್ನು ಮನೆ-ಮನಗಳಲ್ಲಿಂದ ಹೊರದೂಡಲು ಅಸಮರ್ಥರಾಗಿದ್ದಾರೆ. ಆಂಗ್ಲರು ಈ ದೇಶವನ್ನು ಬಿಟ್ಟುಹೋದರೂ ಆಂಗ್ಲಭಾಷೆ ಇಂದಿಗೂ ನಮ್ಮ ರಾಷ್ಟ್ರಭಾಷೆಯಾಗಿ ನಮ್ಮನ್ನು ಆಳುತ್ತಿದೆ.

—ಇಂಗ್ಲೀಷು ಓದಿದ ಪಂಡಿತರಿಗೆ ಮಾತೃಭಾಷೆಯಾದ ಕನ್ನಡ ಬರುವದಿಲ್ಲ. ಅವರು ಮಾತೃಭಾಷೆಯಲ್ಲಿಯ ಕನ್ನಡ ಪುಸ್ತಕಗಳನ್ನು ಓದುವದಿಲ್ಲ. ಕನ್ನಡಿಗರೂ ಸಂಸ್ಕೃತ ಭಾಷೆಯ ಕಪಿಮುಷ್ಟಿಯಲ್ಲಿಂದ ಪಾರಾಗಲು ಪ್ರಯತ್ನಿಸಿ ಆಂಗ್ಲ ಭಾಷೆಯ ವಜ್ರ ಮುಷ್ಟಿಯಲ್ಲಿ ಸಿಕ್ಕು ಬಿದ್ದಿದ್ದಾರೆ."

"ಮೊದಲಿನವರು ಸಂಸ್ಕೃತ ಭಾಷೆಯ ಕಪಿಮುಷ್ಟಿಯಲ್ಲಿ ಸಿಕ್ಕಿಬಿದ್ದಿರಲಿಲ್ಲವೇನು?"

ನಾನೆಂದೆ.

"ಅದು ಕಪಿ ಮುಷ್ಟಿಯಲ್ಲ. ಮಾತೆಯ ಆಲಿಂಗನ. ಸಂಸ್ಕೃತಭಾಷೆ ಎಲ್ಲ ಭಾಷೆಗಳ ಜನನಿ. ಮಾತೆಯ ಆಲಿಂಗನದಿಂದ ಕನ್ನಡ ಭಾಷೆಯು ಪುಷ್ಟಿಗೊಂಡು ಬೆಳೆಯಿತು. ಸಮೃದ್ಧಗೊಂಡಿತು. ಇಂದೂ ಶುದ್ಧ ಕನ್ನಡ ಯಾರಿಗೂ ಬರುವದಿಲ್ಲ. ಸಂಸ್ಕೃತ ಪದಗಳನ್ನು ಉಪಯೋಗಿಸದೆ ಕನ್ನಡ ಭಾಷೆಯನ್ನಾಡುವ ಪಂಡಿತನಿನ್ನೂ ಜನ್ಮ ತಾಳಬೇಕಾಗಿದೆ."

"ಶಿವಶರಣರೂ ಕನ್ನಡದಲ್ಲಿಯೆ ಬರೆಯಲಿಲ್ಲವೇನು?"

"ಇಲ್ಲ. ಶಿವಶರಣರ ವಚನಗಳಲ್ಲಿ ಅನೇಕ ಸಂಸ್ಕೃತ ಪದಗಳಿವೆ. ಇವರು ಪದ್ಯದಲ್ಲಿ ಬರೆಯುವವನ್ನು ಬಿಟ್ಟು ಗಧ್ಯದಲ್ಲಿ ಬರೆದರು. ಇದು ಆಡು ಭಾಷೆಯಲ್ಲ. ಪ್ರಾಸ, ಲಯಬದ್ಧವಾದ ಕನ್ನಡ. ಜನಪದ ಸಾಹಿತ್ಯವೂ ಆಡು ಭಾಷೆಯಲ್ಲಿ. ಬರೆಯಲ್ಪಟ್ಟಿಲ್ಲ. ಜಾನಪದ ಸಾಹಿತ್ಯದಲ್ಲಿಯ ಭಾಷೆಯಂತೆ ಜನರೂ ಮಾತಾಡುವದಿಲ್ಲ. ಶಿವಶರಣರು ಬರೆದ ವಚನಗಳಂತೆ ಯಾರೂ ಮಾತಾಡುತ್ತಿದ್ದಿಲ್ಲ ಶಿವಶರಣರ ಎಷ್ಟೋ ವಚನಗಳು ಇಂದಿನ ಸುಶಿಕ್ಷಿತರಿಗೆ ತಿಳಿಯದಾಗಿ ಅಂದಿನ ಅಶಿಕ್ಷಿತರಿಗೆ ತಿಳಿಯುವ ಬಗೆಯುಂತು?

—ಶಿವಶರಣರು ಬರೆದಂತೆ ಮುಂದಿನ ಯಾವ ಕವಿಯೂ ಬರೆಯಲಿಲ್ಲ, ಹರಿಹರ ಸಹ ಚಂಪೂ ಕಾವ್ಯವನ್ನು ಬರೆದಿದ್ದಾನೆ. ಮುಂದಿನ ಕೆಲವು ಕವಿಗಳು ಸಂಸ್ಕೃತ ಛಂದಸ್ಸನ್ನು ತ್ಯಜಿಸಿ ಕನ್ನಡ ಛಂದಸ್ಸಿನಲ್ಲಿ ಬರೆದರು. ಕೆಲವರು ಚಂಪೂ ಶೈಲಿಯನ್ನೇ ಮುಂದೊರೆಯಿಸಿಕೊಂಡು ಹೋದರು. ಎಲ್ಲರೂ ಸಂಸ್ಕೃತ ಪದಗಳನ್ನು ಧಾರಾಳವಾಗಿ ಉಪಯೋಗಿಸಿದ್ದಾರೆ. ಆಂಗ್ಲ ಭಾಷೆಯ ಅನುಯಾಯಿಗಳು ಸಂಸ್ಕೃತ ಬೇಡವೆನ್ನುತ್ತಾರೆ. ಕನ್ನಡವನ್ನು ಕುಲಗೆಡಿಸಿದ ಇವರು ಕನ್ನಡ ಭಾಷೆಯ ಉದ್ಧಾರದ ಕೂಗನ್ನೆಬ್ಬಿಸಿದ್ದಾರೆ. ಕನ್ನಡವನ್ನು ಒದ್ದು ಆಂಗ್ಲಭಾಷೆಯನ್ನಪ್ಪಿಕೊಂಡವರು ಕನ್ನಡ ಭಾಷೆ-ಸಾಹಿತ್ಯವನ್ನು ಸಮೃದ್ಧಗೊಳಿಸಿದ್ದೇವೆಂದು ಆಡಿಕೊಳ್ಳುತ್ತಿದ್ದಾರೆ.

ಹೀಗೆ ನಮ್ಮ ಚರ್ಚೆಯು ಅಂದಿನ ದಿನ ಕೊನೆಗೊಂಡಿತು



ಕವಿಭೂಷಣ

ಶ್ರೀ ಬೆಟಗೇರಿ ಕೃಷ್ಣಶರ್ಮರದು ನಿರಾಡಂಬ ಜೀವನ. ಅವರ ಪಾಂಡಿತ್ಯ, ಸದಾಚಾರ ಮತ್ತು ಸಜ್ಜನಿಕೆಯೆದುರು ಎಲ್ಲರೂ ತಲೆಬಾಗಬೇಕು. ಶ್ರೀಯುತರು ಜೀವನದಲ್ಲಿಯ ನೋವನ್ನು, ಕಷ್ಟ-ನಷ್ಟಗಳನ್ನು ಬದಿಗಿರಿಸಿ ಕನ್ನಡಕ್ಕಾಗಿ ದುಡಿಯುತ್ತಿದ್ದಾರೆ. ಪತ್ರಿಕೋದ್ಯಮಿಗಳಾಗಿ, ಗ್ರಂಥಕರ್ತರಾಗಿ, ಇತಿಹಾಸ ಸಂಶೋಧಕರಾಗಿ ಕವಿಭೂಷಣರಾಗಿ, ಚಿಂತಕರಾಗಿ, ವಿಮರ್ಶಕರಾಗಿ, ಹಾಸ್ಯ ಸಾಹಿತ್ಯ ಪರಿಣಿತರಾಗಿ, ಜನಪದ ಸಾಹಿತ್ಯಪಂಡಿತರಾಗಿ, ಶ್ರೇಷ್ಠ ಕಾದಂಬರಿಕಾರರಾಗಿ ನಿರಪೇಕ್ಷ ಬುದ್ಧಿಯಿಂದ ಕನ್ನಡ ನಾಡು-ನುಡಿಯ ಸೇವೆಯನ್ನು ಮಾಡುತ್ತಿದ್ದಾರೆ. ಕನ್ನಡದಲ್ಲಿ ಇವರಂತಹ ಸಾಹಿತಿ ಇನ್ನೊಬ್ಬರಿಲ್ಲ.

ವಿವಿಧಮುಖ ಪಾಂಡಿತ್ಯ ಬೆಟಗೇರಿಯವರದು. ಒಳ್ಳೆಯದನ್ನು ಒಳ್ಳೆಯದೆಂದು—ಕೆಡಕಾದುದನ್ನು ಕೆಡಕಾದುದೆಂದು ಹೇಳುವ ನಿಷ್ಠುರ ಸ್ವಭಾವ ಬೆಟಗೇರಿಯವರಾದ್ದರಿಂದ ಎಷ್ಟೋ ಜನರು ಅವರಿಂದ ದೂರಸರಿದರು. ಹೀಗೆ ದರ್ಜೆಯ ಸಾಹಿತ್ಯದ ಪ್ರಶಂಸೆಯನ್ನು ಅವರೆಂದಿಗೂ ತೊಡಲಿಲ್ಲ. ಇದೂ ವಿಮರ್ಶಕನಲ್ಲಿರಬೇಕಾದ ಸದ್ಗುಣ. ಅನ್ಯರು ಬೆಟಗೇರಿಯವರ ಪಾಂಡಿತ್ಯವನ್ನು ದ್ವೇಷಿಸಿದರೂ ಕರ್ನಾಟಕ ವಿದ್ಯಾಪೀಠವು ಅವರಿಗೆ ಗೌರವಪರ ಡಾಕ್ಟರೇಟ ಪದವಿಯನ್ನು ಪ್ರದಾನ ಮಾಡಿ ಸತ್ಕರಿಸಿದುದು ಸ್ತುತ್ಯ ಉಪಕ್ರಮವಾಗಿದೆ. ಶ್ರೀ ಬೆಟಗೇರಿಯವರು ನಿಂದಕರನ್ನು ಮೆಟ್ಟಿ ನಿಂತಿದ್ದಾರೆ. ನಿಂದಕರನ್ನು ಮೂಕರನ್ನಾಗಿ ಮಾಡಿದ್ದಾರೆ. ಧಾರವಾಡದ ಕನ್ನಡಿಗರು ಶ್ರೀ ಬೆಟಗೇರಿಯವರನ್ನು ಉಪೇಕ್ಷಿತರನ್ನಾಗಿ ಮಾಡಿ ಯಾವ ಪುರುಷಾರ್ಥವನ್ನು ಸಾಧಿಸಿದರು ?

ನಾನು ಕ್ರಿ. ಶ. ೧೯೭೭ರ ರಲ್ಲಿ 'ಎರಡು ಪಕ್ಷಿಗಳು' ಎಂಬ ಹೆಸರಿನ 'ಸಾಂಗ ರೂಪಕ' ಕಾದಂಬರಿಯನ್ನು ಬರೆದೆನು. ನಾನು ಈ ಕಾದಂಬರಿಯನ್ನು ನನ್ನ ಗುರುಗಳಾದ ಶ್ರೀಬೆಟಗೇರಿಯವರಿಗೇ ಸಮರ್ಪಿಸಿರುವೆನು. ಈ ಕಾದಂಬರಿಯನ್ನು ಪರಿಷತ್ತಿನ ಅಧ್ಯಕ್ಷರಿಗೆ ಮತ್ತು ಕೆಲವು ಜೇಷ್ಠಶ್ರೇಷ್ಠ ಕಾದಂಬರಿಕಾರರಿಗೆ ಕಳಿಸಿಕೊಟ್ಟೆನು. ಆದರೆ ಯಾರೂ ಕಾದಂಬರಿಯ ಬಗ್ಗೆ ತಮ್ಮ ಅಭಿಪ್ರಾಯವನ್ನು ತಿಳಿಸಲಿಲ್ಲ. ಅಲ್ಲದೆ ಕಾದಂಬರಿಯ ಪ್ರತಿ ತಲುಪಿದೆಯೆಂದು ತಿಳಿಸುವ ಸಭ್ಯತೆಯನ್ನು ತೋರಿಸಲಿಲ್ಲ. ಕೆಲವರು ತಿಳಿಸುತ್ತೇವೆಂದು ಹೇಳಿದವರೂ ತಿಳಿಸಲಿಲ್ಲ. ಆದ್ದರಿಂದ ನಾನು ಸ್ವಲ್ಪ ನೊಂದುಕೊಂಡೆನು. ನೊಂದ ಮನಸ್ಸಿನಿಂದ ನಾನು ಶ್ರೀ ಬೆಟಗೇರಿಯವರನ್ನು ಕಾಣಲು ಹೋದೆನು.

ನಾನು ದೃಷ್ಟಿಗೆ ಬೀಳುತ್ತಲೆ ಶ್ರೀಬೆಟಗೇರಿಯವರು ಸಂತನಭರಿತ ವಾಣಿಯಲ್ಲಿ ಅಂದರು:

"ನೀನು ಕಳಿಸಿದ ಕಾದಂಬರಿ ಮುಟ್ಟಿದೆ. ಅದೇ ದಿನ ಓದಿ ಮುಗಿಸಿದೆನು. ನನ್ನ ಅಭಿಪ್ರಾಯವನ್ನು ಬರೆಯಬೇಕೆನ್ನುವಷ್ಟರಲ್ಲಿಯೆ ನೀನು ಬಂದು ಬಿಟ್ಟೆ."

"ಕಾದಂಬರಿ ಸರಿಯಾಗಿದೆಯೆ ?"

–ನಾನು ಭಯಮಿಶ್ರಿತ ವಾಣಿಯಲ್ಲಿ ಕೇಳಿದೆನು.

"ಅತ್ಯುತ್ತಮವಾಗಿದೆ. ನನಗೆ ನಿನ್ನ ಕಾದಂಬರಿಯನ್ನು ಓದಿ ಅತ್ಯಾನಂದವಾಯಿತು."

ಶ್ರೀ ಬೆಟಗೇರಿಯವರ ಮಾತುಗಳನ್ನು ಕೇಳಿ ನನ್ನ ಮನಸ್ಸು ಪುಲಕಿತಗೊಂಡಿತು. ನಾನು ಕಾದಂಬರಿಯನ್ನು ಬರೆಯಲು ಪಟ್ಟಶ್ರಮದ ಪರಿಹಾರವಾದಂತಾಯಿತು. ನಾನು ಸಾವರಿಸಿಕೊಳ್ಳುತ್ತಿದ್ದಂತೆ ಅಂದೆನು:

"ದೇವರ ಬಗ್ಗೆ ... ಸೌಂದರ್ಯದ ಬಗ್ಗೆ ಬರೆದದ್ದು ..."

"ಉತ್ಕೃಷ್ಟವಾಗಿದೆ. ಇದರಲ್ಲಿ ವೇದೋಪನಿಷತ್ತುಗಳ ಸಾರವು ಬಂದಿದೆ. ನೀನು ಬರೆಯುವದನ್ನು ಬಿಟ್ಟಿದ್ದರೆ ಇಂತಹ ಸುಂದರ ಕಾದಂಬರಿ ಜನ್ಮ ತಾಳುತ್ತಿದ್ದಿತೆ?"

ನೀವೊಬ್ಬರೆ ನನ್ನ ಕಾದಂಬರಿಯ ಬಗ್ಗೆ ಬಿಚ್ಚು ಮನಸ್ಸಿನ ಅಭಿಪ್ರಾಯಗಳನ್ನು ಹೇಳಿದವರು. ಉಳಿದವರೆಲ್ಲರೂ ಮೂಕರಾಗಿದ್ದಾರೆ."

ಈ ಕಾದಂಬರಿಯ ಬಗ್ಗೆ ಅಭಿಪ್ರಾಯವನ್ನು ವ್ಯಕ್ತಪಡಿಸುವದು ಸಾಮಾನ್ಯರ ಕೆಲಸವಲ್ಲ. ಈ ಕಾದಂಬರಿಯು ಓದಿದವರನ್ನು ಮೂಕರನ್ನಾಗಿ ಮಾಡುತ್ತದೆ.

—ಇದೊಂದು ಶ್ರೇಷ್ಠ ದರ್ಜೆಯ ವೈಚಾರಿಕ ಕಾದಂಬರಿ. ಸಾಮಾನ್ಯರಿಗೆ ಈ ಕಾದಂಬರಿ ತಿಳಿಯುವದಿಲ್ಲ. ಓದಿದರೆ ಅರ್ಥವಾಗುವದಿಲ್ಲ. ಓದಿ ವಿಚಾರ ಮಾಡಿದರೆ ಅರ್ಥವಾಗುತ್ತದೆ."

"..........."

"ಸಾಂಗ ರೂಪಕ ಕಾದಂಬರಿಗೆ ತಕ್ಕ ಭಾಷೆಯನ್ನು ಬರೆದಿರುವಿ. ಇನ್ನು ಮುಂದೆ ನಿನ್ನ ಪ್ರತಿಭೆ ಬರೆಹದ ಅಂಗಳದಲ್ಲಿ ಗರಿಗೆದರಿ ಕುಣಿಯುತ್ತದೆ.

ಶ್ರೀ ಬೆಟಗೇರಿಯವರ ಅಭಿಪ್ರಾಯವನ್ನು ಕೇಳಿ ನೊಂದ ನನ್ನ ಮನಸ್ಸು ಸಂತಸದ ಉಸಿರನ್ನು ಬಿಟ್ಟಿತು.

ಶ್ರೀ ಬೆಟಗೇರಿಯವರ ಅನೇಕ ಸಾರೆಯ ಭೆಟ್ಟಿಯಿಂದ ನಾನೇ ಪ್ರಭಾವಿತನಾದೆನಲ್ಲದೆ ಅವರ ಜ್ಞಾನವು ಪಾಂಡಿತ್ಯಪೂರ್ಣ ವಿವರಣೆಯು, ರಸಿಕತೆಯಿಂದೊಡಗೂಡಿದ ವಿಮರ್ಶೆಯು, ವಿಶಾಲದೃಷ್ಟಿಕೋನದ, ಶುದ್ಧ ಆಚಾರ–ವಿಚಾರಗಳ ಮತ್ತು ಆತ್ಮೀಯತೆ ಉದಾರ ಅಂತಃಕರಣಗಳ ಪರಿಣಾಮವು ನನ್ನ ಮನಸ್ಸಿಗೆ ಮೇಲಾಯಿತು. ನಾನು ಅವರೊಡನೆ ನಡೆಸಿದ ಒಂದೊಂದು ಚರ್ಚೆಯು ಒಂದೊಂದು ಪಾಠವಾಗಿದ್ದಿತು. ಒಂದೊಂದು ಪಾಠವೆಂದರೆ ಪಂಚ ಪಕ್ವಾನ್ನದ ಊಟವಿದ್ದಂತೆ. ಶ್ರೀ ಬೆಟಗೇರಿಯವರು ಪರಂಪರಾವಾದಿಗಳಾಗಿದ್ದರೂ ಅವರು ಸಮಕಾಲೀನ ಪ್ರಜ್ಞೆಯಿಂದ ದೂರಾಗಿಲ್ಲ: ನವೋದಯಕಾಲದ ಮುಂಬೆಳಗು, ನವೋದಯ ಕಾಲ, ಸ್ವಾತಂತ್ರ್ಯೋತ್ತರದ ಕಾಲಗಳಲ್ಲಿಯ ಸಾಹಿತ್ಯದ ಬೆಳವಣಿಗೆಯನ್ನು ನಿಷ್ಪಕ್ಷಪಾತತನದಿಂದ ಖಂಡತುಂಡವಾಗಿ, ಮುಚ್ಚು ಮರೆಮಾಡದೆ ನನ್ನೊಡನೆ ಚರ್ಚಿಸಿದ್ದಾರೆ. ನಮ್ಮ ಪ್ರತಿಸಾರೆಯ ಚರ್ಚೆಯನ್ನು ಪುಸ್ತಕ ರೂಪದಲ್ಲಿ ಬರೆದರೆ ಅದೊಂದು ಉತ್ಕೃಷ್ಟಗ್ರಂಥವಾಗಬಹುದು. ಜನಪದ ಸಾಹಿತ್ಯದ ಬಗ್ಗೆ ಇದ್ದ ಅವರ ಜ್ಞಾನವು ಸಾಗರಸದೃಶವಾಗಿರುವದು. ಒಮ್ಮೆ ನಾನು ಅವರಿಗೆ ಚರ್ಚೆಯ ಸಮಯದಲ್ಲಿ—

"ಜೀವನದ ಸಾಹಿತ್ಯ ಚರಿತ್ರೆಯನ್ನು ನೀವೇಕೆ ಬರೆಯಬಾರದು ?"

–ನಾನೆಂದೆ.

"ಬರೆಯುವ ವಿಚಾರವನ್ನಿಟ್ಟುಕೊಂಡಿದ್ದೇನೆ. ಅದಕ್ಕಿಂತಲು ಮೊದಲು ಜಾನಪದ ಭಾಷೆಯ ವ್ಯಾಕರಣವನ್ನು ಬರೆಯುವ ಎಣಿಕೆ ಹಾಕುತ್ತಿದ್ದೇನೆ. ಜಾನಪದ ಸಾಹಿತ್ಯದ ಅಭ್ಯಾಸಕ್ಕೆ ವ್ಯಾಕರಣದ ಅವಶ್ಯಕತೆಯಿದೆ."

"................."

"ಇದು ಓರ್ವ ವ್ಯಕ್ತಿ ಮಾಡುವ ಕೆಲಸವಲ್ಲ. ಒಂದು ಸಂಸ್ಥೆ ಮಾಡುವ ಕೆಲಸ."

"ತಾವು ಪುರಂದರದಾಸರ ಬಗ್ಗೆ ಹೊತ್ತಿಗೆಗಳನ್ನು ಬರೆದು ಒಂದು ಸಂಸ್ಥೆಯು ಮಾಡುವ ಕೆಲಸವನ್ನು ನೀವೊಬ್ಬರೆ ಮಾಡಿಲ್ಲವೆ ?"

"ಮಾಡಿದ್ದೇನೆ. ಅದೊಂದು ನನ್ನ ಮಹತ್ವಾಕಾಂಕ್ಷೆಯಾಗಿದ್ದಿತು. ಅದು ಪೂರ್ತಿಯಾದ ಬಗ್ಗೆ ನನಗೆ ತೃಪ್ತಿಯಿದೆ. ಗುಣ–ದೋಷಗಳನ್ನು ನಿರ್ಧರಿಸುವದು ಬರಲಿರುವ ಜನಾಂಗ. ಪುರುಷಾರ್ಥಗಳನ್ನು ಪುರಂದರದಾಸರಷ್ಟು ತಿಳಿಯಾಗಿ ಹೇಳಿದವರು ಇನ್ನೋರ್ವರಿಲ್ಲ. ಪುರಂದರದಾಸರ ಸಾಹಿತ್ಯ ಶ್ರೀ ಸಾಮಾನ್ಯರಿಗಾಗಿ ಬರೆದ ಸಾಹಿತ್ಯ. ಜಾತಿ–ಕುಲಗಳನ್ನು ಮೀರಿ ನಿಂತವರಿಗಾಗಿ ಬರೆದ ಸಾಹಿತ್ಯ. ಪುರಂದರದಾಸರು ಪ್ರಪ್ರಥಮ ಪ್ರಗತಿಶೀಲ ಸಾಹಿತಿಗಳು. ಅವರಾದ ನಂತರ ಸರ್ವಜ್ಞ."

"ಇಂದಿನ ಪ್ರಗತಿಶೀಲ ಲೇಖಕರು ಪುರಂದರದಾಸರನ್ನಾಗಲಿ, ಸರ್ವಜ್ಞನನ್ನಾಗಲಿ ಗುರುಗಳೆಂದು ಬಗೆಯುವದಿಲ್ಲ".

"ಅವರು ಗುರುಗಳು ಈ ದೇಶದವರಲ್ಲ. ಪರದೇಶದವರು."

"ಗುರುಗಳೆ, ಪ್ರಗತಿಶೀಲರು ಹೋದರು, ನವ್ಯ ಅತಿನವ್ಯ ಸಾಹಿತಿಗಳು ಹೋದರು...ಇನ್ನು ಮುಂದೆ...."

"ಉತ್ತಮ ಸಾಹಿತಿಗಳು ಜನ್ಮತಾಳುತ್ತಾರೆ".

–"ನಿನಗೊಂದು ಮಾತನ್ನು ಹೇಳಲೆ ?"

"ಏನು ?"

"ನೀನು ಯಾವಾಗಲೂ ನನ್ನನ್ನು ಗುರುಗಳೆಂದು ಸಂಬೋಧಿಸಬೇಡ."

"ನೀವು ಗುರುಗಳಲ್ಲವೇನು ?"

"ಗುರುವಾಗುವದಕ್ಕಿಂತ ಆತ್ಮೀಯಗೆಳೆಯರಾಗಿರುವದು ನನಗೆ ಹೆಚ್ಚು ಇಷ್ಟ."

"ಗುರುವಿನ ಯೋಗ್ಯತೆ ಗೆಳೆಯನಿಗೆಂದಾದರೂ ಬಂದೀತೆ ? ಗುರುವಾದವನು ಗೆಳೆಯನೂ ಆಗಿರುತ್ತಾನೆ."

ಶ್ರೀ ಬೆಟಗೇರಿಯವರು ನನ್ನ ಮುಖವನ್ನು ನಿರೀಕ್ಷಿಸಿ ನೋಡಿದರು.

ಮರುಕ್ಷಣ ಚಹದ ಕಪ್ಪುಗಳು ನಮ್ಮೆದುರು ಬಂದವು. ಇಬ್ಬರೂ ಚಹಾಪಾನ ಮಾಡಲನುವಾದೆವು.



ನಾನೂ ಕಾರಣಾಂತರದಿಂದ ನನ್ನ ಹಳ್ಳಿಗೆ ಹೋದಾಗ ಧಾರವಾಡಕ್ಕೆ ಹೋಗುವದಂ ವಾಡಿಕೆ. ಹಳ್ಳಿಯ ಕೆಲಸವನ್ನು ಮುಗಿಸಿ ನಾನು ಧಾರವಾಡಕ್ಕೆ ಹೋದೆನು. ಬಸ್ಸಿಗಾಗಿ ಕಾದು ನಿಂತರೂ ಬಸ್ಸು ದೊರೆಯದ್ದರಿಂದ ನಾನು ಕಾಲು ನಡಿಗೆಯಿಂದಲೆ ಬೆಟಗೇರಿಯವರ ಮನೆಗೆ ಹೋದೆನು.

"ಬಿಸಿಲಿನಲ್ಲಿಯೇ ಬಂದುಬಿಟ್ಟಿಯಲ್ಲ ?"

"ಅಹುದು. ಹಳ್ಳಿಗೆ ಹೋಗಿದ್ದೆ. ನಿಮ್ಮನ್ನು ಕಂಡುಹೋಗಬೇಕೆಂದು ಬಂದೆ.'

ನಾವು ಮಾತಿಗಾರಂಭಿಸುತ್ತಿದ್ದಂತೆ ಶ್ರೀ ಬೆಟಗೇರಿಯವರ ಚಿರಂಜೀವ ಪಾನಕದಿಂದ ತುಂಬಿದ ಗ್ಲಾಸನ್ನು ನಮ್ಮ ಕೈಗಿರಿಸಿದನು.

'ಉರಿಬಿಸಿಲಿನಲ್ಲಿಂದ ಬಂದಿರುವೆ. ತೆಗೆದುಕೊಳ್ಳು,

—ಬೆಟಗೇರಿಯವರು ಆತ್ಮೀಯತೆಯಿಂದೊಡಗೂಡಿ ಅಂದರು.

ಬಿಸಿಲಿನ ತಾಪದಿಂದ ಕಂಗೆಟ್ಟ ನಾನು ಪಾನಕದ ಪ್ರಾಶನದಿಂದ ಸಂತಸದ ಉಸಿರೊಂದನ್ನು ಬಿಟ್ಟೆನು.

"ನಾನು ನನಗೊಂದು ಸಂಗತಿಯನ್ನು ಹೇಳಬೇಕು"

ಶ್ರೀ ಬೆಟಗೇರಿಯವರು ಮುಖದಲ್ಲಿ ಹೊರಸೂಸುವ ಮೆಲುನಗೆಯೊಂದಿಗೆ ಅಂದರು.

'ಏನು' ?

—ನಾನು ಕುತೂಹಲಗೊಂಡು ಕೇಳಿದೆ.

'ನೀನು ಬರೆದ 'ಎರಡು ಪಕ್ಷಿಗಳು' ಈ ಕಾದಂಬರಿಯು ಧಾರವಾಡದಲ್ಲಿ ಬಿರುಗಾಳಿಯನ್ನೆಬ್ಬಿಸಿವೆ'

"ಹೀಗೇನು!"

"...ಕೆಲವು ಬುದ್ಧಿಜೀವಿಗಳು ನಿನ್ನ ಕಾದಂಬರಿಯನ್ನು ವಿಪರೀತವಾಗಿ ತಿಳಿದುಕೊಂಡಿದ್ದಾರೆ".

"ಯಾರವರು" ?

"ಸಾಹಿತ್ಯವನ್ನರಿಯದ ಮಂದಮತಿಗಳು. ಗುಂಪುಗಾರಿಕೆಯ ಬಲದಿಂದ ಮೆರದಾಡುವ ಸಾಹಿತ್ಯಕ್ಷೇತ್ರದಲ್ಲಿಯ ಪುಂಡರು."

"ಈ ಪುಂಡರು ಏನೆನ್ನುತ್ತಾರೆ ?"

"ನೀನು ಬುದ್ಧಿ ಪುರಸ್ಕರವಾಗಿ ಈ ಕಾದಂಬರಿಯನ್ನು ಬರದಿರುವಿಯಂತೆ. ಇದು ಶ್ರೀ ದ.ರಾ. ಬೇಂದ್ರೆಯವರ ಮತ್ತು ನನ್ನ ಮೇಲೆ ಬರೆಯಲ್ಪಟ್ಟಿದೆಯಂತೆ."

ನಾನು ಬಿಚ್ಚು ಮನಸ್ಸಿನಿಂದ ನಕ್ಕೆನು.

...ನಗಬೇಡ. ಇನ್ನೂ ಕೇಳು, ಈ ಕಾದಂಬರಿಯಲ್ಲಿಯ ಸುರೂಪ ಪಕ್ಷಿಯೆಂದರೆ ನಾನಂತೆ. ಕುರೂಪ ಪಕ್ಷಿಯೆಂದರೆ ಶ್ರೀ ಬೇಂದ್ರೆಯವರಂತೆ.

—ನೀನು ವೈಯಕ್ತಿಕ ದ್ವೇಷದಿಂದ ಈ ಕಾದಂಬರಿಯನ್ನು ನಮ್ಮಿಬ್ಬರ ಮೇಲೆ ಬರೆದಿರುವಿಯೆಂದು ನಿನ್ನ ಮೇಲೆ ಆರೋಪ ಹೊರಿಸುತ್ತಾರೆ."

"ಇವರೆಲ್ಲರು ಬೇಂದ್ರೆಯವರ ಗುಂಪಿನವರೇನು ?

'ಅಹುದು'

ಈ ಮೂರ್ಖರಿಗೆ ಸಾಹಿತ್ಯವೆಂದರೇನೆಂಬುದು ಗೊತ್ತಿವೆಯೆ ? ಗೊತ್ತಿರುವುದರಿಂದಲೇ ಶ್ರೀ ಆಲೂರ ವೆಂಕಟರಾಯರನ್ನು ಮತ್ತು ನಿಮ್ಮನ್ನು ಮೂಲೆಗುಂಪಾಗಿ ಮಾಡಿದರು.

—ಈ ಮೂರ್ಖರಿಗೆ ನಾನು ಹೆದರುವದಿಲ್ಲ. ಅವರಿಗೆ ಕೆಚ್ಚೆದೆಯಿದ್ದರೆ ನನ್ನನ್ನು ಕೇಳಲಿ, ನಾನು ಅವರಿಗೆ ಸಮರ್ಪಕವಾಗಿ ಉತ್ತರಿಸಲು ಸಮರ್ಥನಿದ್ದೇನೆ."

"ಧಾರವಾಡದ ಸಾಹಿತಿಗಳು ಹೀಗಿದ್ದಾರೆ."

"ಬೆಳಗಾವಿಯ ಸಾಹಿತಿಗಳು ಧಾರವಾಡದ ಸಾಹಿತಿಗಳಿಗೆ ಹೆದರುವದಿಲ್ಲ. ಗಡಿನಾಡಿನ ಕೆಚ್ಚೆದೆಯ ಕನ್ನಡಿಗರು ನಾವು"

"ಒಳ್ಳೆಯ ಸಂಗತಿಯಲ್ಲಿಯ ದೋಷಗಳನ್ನು ಕಂಡು ಹಿಡಿಯುವದೇ ಧಾರವಾಡ ಸಾಹಿತಿಗಳ ವೈಶಿಷ್ಟ್ಯ !"

ನೀವು ಚಿಂತಿಸದಿರಿ. ನಿಂದಕರನ್ನು ಎದುರಿಸಿ ನಿಲ್ಲುವ ಶಕ್ತಿ ನಿಮ್ಮ ಆಶೀರ್ವಾದದ ಬಲದಿಂದ ನನ್ನಲ್ಲಿದೆ.

"ಧಾರವಾಡದ ಬ್ರಾಹ್ಮಣರು ನನ್ನ ಜೀವಂತ ಸಮಾಧಿಯನ್ನು ಕಟ್ಟಿದರು. ನಾನು ಬರೆದದ್ದನ್ನು ಯಾರೂ ಓದಲಿಲ್ಲ. ನನ್ನ ತಪ್ಪುಗಳನ್ನು ತೋರಿಸಲಿಲ್ಲ.

–ನಾನು ಪ್ರಶಸ್ತಿಗಾಗಿ ಬರೆಯುವದಿಲ್ಲ, ಕೀರ್ತಿಗಾಗಿ ಹಂಬಲಿಸುವದಿಲ್ಲ. ನಾನೋರ್ವ ಕನ್ನಡ ಸರಸತಿಯ ಭಕ್ತ! ಸಾಧಕ !

–ಕನ್ನಡಿಗರು ನನ್ನನ್ನು ಅರಿತುಕೊಳ್ಳಲಿ! ನನ್ನ ನಿಂದೆಯನ್ನು ಮಾಡಿದರೆ ಇವರಿಗೇನು ಬರುವದು ?

ಇವರು ದೊಡ್ಡವರಾಗುವರೆ ?"

"ಇವರಿಗೆ ಪ್ರಶಸ್ತಿಗಳು ದೊರೆಯುತ್ತವೆ."ನಾನೆಂದೆ.

"ದೊರೆಯಲಿ ! ದೊರೆಯಲಿ ! ಪ್ರಶಸ್ತಿಗರ್ಹವಾದ ಸಾಹಿತ್ಯವನ್ನು ಇವರು ಬರೆಯುವದಿಲ್ಲ. ರಾಜಕಾರಣಿಗಳಿಗೆ ನಮಸ್ಕರಿಸಿ–ಲಕ್ಷ್ಮೀ ಪುತ್ರರಿಗೆ ದುಂಬಾಲ ಬಿದ್ದವರೇ ಪ್ರಶಸ್ತಿಗಳನ್ನು ಪಡೆಯುತ್ತಾರೆ.

–ನೋಡು, ನನಗೆ ಇಂತಹ ಪ್ರಶಸ್ತಿಗಳು ಬೇಡ. ಇಂಥ ಪ್ರಶಸ್ತಿಗಳನ್ನು ಪಡೆಯುವದು ದ್ರೋಹ ! ಆತ್ಮವಂಚನೆ ಪರವಂಚನೆಯೂ ಅಹುದು.

–ನನ್ನ ಯೋಗ್ಯತೆಯನ್ನು ಇಂದಿನವರು ಅರಿಯದಿದ್ದರೂ ಅರಿಯುವವರು ಹುಟ್ಟಿಬರುತ್ತಾರೆಂಬುದರ ಬಗ್ಗೆ ನನಗೆ ಆತ್ಮ ವಿಶ್ವಾಸವಿದೆ."

ನಾನು ಬೆಳಗಾವಿಗೆ ಬಂದ ಮೇಲೆ ಈ ಸಂಗತಿಯನ್ನು ನನ್ನ ಗೆಳೆಯರಿಗೆ ಹೇಳಿದೆನು.

೫

ಕ್ರಿ. ಶ. ೧೯೪೬ ರಲ್ಲಿ ಪ್ರಗತಿಶೀಲ ಲೇಖಕರ ಸಂಘವೊಂದು ಬೆಂಗಳೂರಲ್ಲಿ ಆರಂಭವಾಯಿತು. ಪ್ರಗತಿಶೀಲರು ಆಂದೋಲನದ ಕಹಳೆಯನ್ನೂದಿದರು. ಆದರೆ ವರ್ಷದ ಕಾಲಾವಧಿಯಲ್ಲಿಯೆ ಈ ಸಂಘವು ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು. ದಿ. ಅನಕೃ ಅವರು ಈ ಸಂಘದ ಮುಂದಾಳುಗಳಾಗಿದ್ದರು. ಕೆಲವು ಸಾಮ್ಯವಾದಿಗಳೂ ಈ ಗುಂಪಿನಲ್ಲಿ ಸೇರಿದ್ದರು.

ಈ ಸಮಯದಲ್ಲಿ ಶ್ರೀ ಬೆಟಗೇರಿಯವರು ಜಯಂತಿ ಪತ್ರಿಕೆಯಲ್ಲಿ ಪ್ರಗತಿಶೀಲ ಸಾಹಿತ್ಯದ ಬಗ್ಗೆ ಕೆಲವು ಲೇಖನಗಳನ್ನು ಬರೆದರು. ಆದ್ದರಿಂದ ಅನಕೃ ಅವರು ಸಿಡಿಮಿಡಿಗೊಂಡು ಏನೇನೊ ಬರೆದರು. ಮಾತಾಡಿದರು. ಆದರೆ ಶ್ರೀಬೆಟಗೇರಿಯವರು ಸೊಪ್ಪುಹಾಕಲಿಲ್ಲ. ಆದ್ದರಿಂದ ಅನಕೃ ಅವರು ತಾವು ಬರೆದ 'ಸಾಹಿತ್ಯ ಮತ್ತು ಕಾಮ ಪ್ರಚೋದನೆ' ಈ ಹೊತ್ತಿಗೆಯನ್ನು ಬೆಟಗೇರಿಯವರ ನಿಂದೆಯಿಂದಲೆ ಆರಂಭಿಸಿದ್ದಾರೆ. ಮುಂದೆ ಪ್ರಗತಿಶೀಲರು ಅಂತಃಕಲಹದ ಮೂಲಕ ಜಗಳಾಡಿ ಹರಿದು ಹಂಚಿಹೋದರು. ಸಾಹಿತ್ಯ ಕ್ಷೇತ್ರದಲ್ಲಿ ಹಾರಾಡಿದ ಅನಕೃ ಅವರನ್ನು ಶ್ರೀ ಬೆಟಗೇರಿಯವರು ತೂರಾಡಿದರು.

ಸಾಹಿತ್ಯಸೇವೆಯು ಬೆಟಗೇರಿಯವರ ವೃತ್ತಿಯೂ ಅಹುದು. ಪ್ರವೃತ್ತಿಯೂ ಅಹುದು. ಅವರೂ ಕನ್ನಡ, ಸಂಸ್ಕೃತ, ಮರಾಠಿ, ಹಿಂದಿ ಮತ್ತು ಆಂಗ್ಲಭಾಷೆಗಳನ್ನು ಬಲ್ಲವರು. ಭಾಗವತ ಸಾಹಿತ್ಯದ ಮೇಲೆ ಅಧಿಕಾರವಾಣಿಯಿಂದ ಮಾತಾಡಬಲ್ಲರು. ಪುಣೆಯ ಪಂಡಿತರು ಶ್ರೀ ಬೆಟಗೇರಿಯವರಿಗೆ ಭೆಟ್ಟಿಯಾಗಲು ಮೇಲಿಂದ ಮೇಲೆ ಧಾರವಾಡಕ್ಕೆ ಬರುತ್ತಾರೆ. ಜ್ಞಾನೇಶ್ವರ ಮಹಾರಾಜರು ಬರೆದ ಜ್ಞಾನೇಶ್ವರಿ ಈ ಗ್ರಂಥವನ್ನು ಶ್ರೀಯುತರು ಆಳವಾಗಿ ಅಭ್ಯಸಿಸಿದ್ದಾರೆ. ಬೆಟಗೇರಿಯವರು ಒಂದು ವಾಚನಾಲಯವಿದ್ದಂತೆ. ಅನೇಕರು ತಾವರಿಯದವರನ್ನು ಬೆಟಗೇರಿಯವರಿಂದ ಅರಿತುಕೊಳ್ಳುತ್ತಾರೆ. ಕರ್ನಾಟಕ ಜಗಜೀವನ, ಸಾಹಿತ್ಯನಾಗಿರುವ ದಾರಿ ನಮ್ಮ ಸಂಸ್ಕೃತಿ ಮತ್ತು ಪರಂಪರೆ, ಬೀಸುವ ಕಲ್ಲಿನ ಹಾಡುಗಳು ಮತ್ತು ಕನ್ನಡ ರಾಜ್ಯರಮಣಾ ಈ ಹೊತ್ತಿಗೆಗಳು ಬೆಟಗೇರಿಯವರ ಪಾಂಡಿತ್ಯದ ದ್ಯೋತಕಗಳಾಗಿವೆ.

ಬೆಟಗೇರಿಯವರು ಶ್ರೇಷ್ಠ ಪತ್ರಿಕಾಕರ್ತರು. ಅವರು ಬೀದಿಯ ಸುದ್ದಿಗಳನ್ನು ಕಲೆಹಾಕಿ ಅವುಗಳ ವ್ಯಾಪಾರವನ್ನು ಮಾಡುವ ಪತ್ರಿಕಾಕರ್ತರಲ್ಲ ಶ್ರೀಯುತರು 'ಜಯಂತಿ' ಮಾಸಪತ್ರಿಕೆಯನ್ನು ಅನೇಕ ವರ್ಷಗಳವರೆಗೆ ಯಶಸ್ವಿಯಾಗಿ ನಡೆಸಿಕೊಂಡು ಬಂದರು. ಈ ಪತ್ರಿಕೆಯು ಕನ್ನಡ ನಾಡಿನ ಅನೇಕ ಹಿರಿ–ಕಿರಿಯ ಸಾಹಿತಿಗಳ ಪ್ರೇಮಾದರಕ್ಕೆ ಪಾತ್ರವಾಗಿದ್ದಿತು. ಶ್ರೀ ಬೆಟಗೇರಿಯವರು ಪತ್ರಿಕೋದ್ಯಮದಿಂದ ಹಣವನ್ನು ಸಂಪಾದಿಸಲಿಲ್ಲ. ಪತ್ರಿಕೆಯ ಸಂರಕ್ಷಣೆ ಸಂವರ್ಧನೆಗಳಿಗಾಗಿ ತಮ್ಮ ಸರ್ವಸ್ವವನ್ನು ಸಮರ್ಪಿಸಿದರು. ನಿರ್ಭಯ. ಧ್ಯೇಯವಾದಿ ಪತ್ರಕಾರರೆಂದು ಕನ್ನಡ ನಾಡಿನಲ್ಲಿ ಹೆಸರು ಗಳಿಸಿದರು. ಜಯಂತಿ ಮಾಸಪತ್ರಿಕೆಯು ಕನ್ನಡ ನಾಡಿನ ಮೂಲೆಮೂಲೆಗಳಲ್ಲಿ ತನ್ನ ಜಯಭೇರಿಯನ್ನು ಮೊಳಗಿಸಿತು. ಶ್ರೀ ಬೆಟಗೇರಿಯವರ ಪತ್ರಿಕಾ ಪ್ರಪಂಚದ ಸೇವೆಯನ್ನು ಮಾಡಿದರು. ವ್ಯಾಪಾರವನ್ನು ಮಾಡಲಿಲ್ಲ.

ಇಂದು ಪತ್ರಿಕಾ ಪ್ರಪಂಚದಲ್ಲಿ ಭಾಂಡವಲದಾರರಿದ್ದಾರೆ. ಗುಂಪುಗಾರಿಕೆಯ ಪ್ರಭುತ್ವವನ್ನು ಬೀರುವ ಸಾಹಿತಿಗಳೂ ಇದ್ದಾರೆ. ಇವರಲ್ಲಿ ಜೇಷ್ಠ ಸಾಹಿತಿಗಳೂ

ಇದ್ದಾರೆ. ಕನಿಷ್ಠರೂ ಇದ್ದಾರೆ. ಜೇಷ್ಠರೂ ಕನ್ನಡ ಸಾಹಿತ್ಯದಲ್ಲಿಯ ಆಗುಹೋಗುಗಳನ್ನು ತಮ್ಮ ಕೈಯಲ್ಲಿ ರಿಸಿಕೊಂಡಿದ್ದಾರೆ. ಸಾಹಿತ್ಯಪರಿಷತ್ತು ಮತ್ತು ಅಧ್ಯಕ್ಷರು ಇವರ ಮುಷ್ಟಿಯಲ್ಲಿ. ರಾಜ್ಯ ಪ್ರಶಸ್ತಿಗಳಲ್ಲಿ ಇವರ ಕೈವಾಡವಿದೆ. ಇವರು ರಾಜಕೀಯ ಮುಖಂಡರ ಕೈಗೊಂಬೆಗಳು. ಅವರು ಕುಣಿಸಿದಂತೆ ಕುಣಿಯುತ್ತಾರೆ. ಸರಕಾರದಿಂದ ವಿಪುಲ ಹಣವನ್ನು ಪಡೆದು ನೀರಿನಂತೆ ವೆಚ್ಚ ಮಾಡುತ್ತಾರೆ. ಕೆಲವರು ಜೇಬಿನಲ್ಲಿಯೂ ಹಾಕಿಕೊಳ್ಳುತ್ತಾರೆ ಇವರು ಪ್ರಶಸ್ತಿಗರ್ಹರಾದವರಿಗೆ ಪ್ರಶಸ್ತಿದೊರೆಯುವಂತೆ ಪ್ರಯತ್ನಿಸುತ್ತಾರೆ.

ಪರಿಷತ್ತಿನಲ್ಲಿ ಜಾತೀಯತೆಯಿವೆ. ಗುಂಪುಗಾರಿಕೆಯಿವೆ. ತಮಗೆ ಬೇಕಾದವರನ್ನೇ ಸಮ್ಮೇಲನದ ಅಧ್ಯಕ್ಷರನ್ನಾಗಿ ಮಾಡುವ ಛಲವಿದೆ. ಜೇಷ್ಠ ಸಾಹಿತಿಗಳಲ್ಲಿ ಬೇರೆ ಜಾತಿಯ ಸಾಹಿತಿಗಳನ್ನು ಪ್ರೇಮದಿಂದ ಕಾಣುವ ವಿಶಾಲಹೃದಯವಿಲ್ಲ. ಸಂಪೂರ್ಣ ಕರ್ನಾಟಕ ಒಂದೇ ಎಂಬ ಭಾವನೆಯಿಲ್ಲ. ಇವರು ಕನ್ನಡ ನಾಮ-ನುಡಿಗಳ ಸೇವೆ ಮಾಡದವರು ಆಂಗ್ಲ ಭಾಷಾಭ್ಯಾಸಮಾಡಿ ಕನ್ನಡದಲ್ಲಿ ಬರೆಯುವವರು. ಆಂಗ್ಲಭಾಷೆಯಿಂದಲೆ ಕನ್ನಡದ ಉದ್ಧಾರವಾಗುವದೆಂದು ಹೇಳುವವರು. ಒಬ್ಬರೊಬ್ಬರ ಸ್ತುತಿ ಮಾಡಿ ಸಮಾಜದಲ್ಲಿ ಹಿರಿಮೆ-ಗರಿಮೆಗಳನ್ನು ಸಂಪಾದಿಸಿದವರು. ಇವರು ಸಾಹಿತ್ಯಕ್ಷೇತ್ರದಲ್ಲಿ ದೊಡ್ಡ ಗುಂಪುಗಾರಿಕೆಯನ್ನು ನಿರ್ಮಿಸಿದವರು.

ವಿದ್ಯಾಪೀಠಗಳಲ್ಲಿಯ ಪೀಠಗಳನ್ನಲಂಕರಿಸಿದವರು ಬಾಯಿಗೆ ಬಂದದ್ದನ್ನು ಮಾತಾಡುತ್ತಾರೆ. ಮನಸ್ಸಿಗೆ ತೋಚಿದ್ದನ್ನು ಬರೆಯುತ್ತಾರೆ. ಇವರು ಕೀಳುದರ್ಜೆಯ ಸಾಹಿತ್ಯವನ್ನು ರಚಿಸಿ ಕನ್ನಡದ ಅಧೋಗತಿಗೆ ಕಾರಣರಾಗಿದ್ದಾರೆ. ಇವರು ವೇದಿಕೆಯ ಮೇಲೆ ನಿಂತುಕೊಂಡು ಮಾತಾಡುವದು, ಸಾಹಿತ್ಯ ರಚಿಸುವವರ ತಮ್ಮ ಸೊತ್ತೆಂದು ಬಗೆದಿದ್ದಾರೆ. ಜನಸಾಮಾನ್ಯರು ಇಂಥವರಿಗೆ ಮಹತ್ವವನ್ನು ಕೊಡುತ್ತಾರೆ.

ಕೀಳುದರ್ಜೆಯ ಸಾಹಿತ್ಯವು ಹೊರಬರಲು ಲೇಖಕರಂತೆ ಪ್ರಕಾಶಕರೂ ಸಂಪಾದಕರೂ ಕಾರಣೀಭೂತರಾಗಿದ್ದಾರೆಂದು ಶ್ರೀ ಬೆಟಗೇರಿಯವರೊಮ್ಮೆ ಚರ್ಚೆಯ ಸಮಯದಲ್ಲಿ ಹೇಳಿದರು.

ಶ್ರೀ ಬೆಟಗೇರಿಯವರು ಪ್ರಸಿದ್ಧಿಗೆ ಬೆನ್ನು ತೋರಿಸಿದವರು. ಅವರು ಉಳಿದ ಜ್ಯೇಷ್ಠ ಸಾಹಿತಿಗಳಂತೆ ಗುಂಪುಕಟ್ಟಿಕೊಂಡು ಪ್ರತಿಷ್ಠೆಗಾಗಿ ಹೆಣಗಾಡಲಿಲ್ಲ. ತಮ್ಮ ಪ್ರಭಾವವನ್ನು ಅನ್ಯರಮೇಲೆ ಬೀರಲು ಪ್ರಯತ್ನಿಸಲ್ಲ. ಜನಸ್ತುತಿಗೆ ಮರುಳಾಗಿ-ಜನರಿಗೆ ಬೇಕಾದ ನವ್ಯ ಅತಿ ನವ್ಯ ಸಾಹಿತ್ಯವನ್ನು ರಚಿಸಲಿಲ್ಲ. ಸಾಹಿತಿಯು ಸಮಾಜದ ಪಾತಳಿಗಿಳಿಯುವ ಸಮಾಜವನ್ನು ತನ್ನ ಪಾತಳಿಗೆತ್ತಲು ಪ್ರಯತ್ನಿಸಬೇಕೆಂದು ಬೆಟಗೇರಿಯವರ ಅಭಿಪ್ರಾಯ. ಇದಕ್ಕೆ ಉದಾಹರಣೆಯೆಂದು ಅವರು ಕವಿ ಶೂದ್ರಕನ 'ಮೃಚ್ಛಕಟಿಕ' ನಾಟಕದ ಉದಾಹರಣೆಯನ್ನು ಮೇಲಿಂದ ಮೇಲೆ ಕೊಡುತ್ತಾರೆ.

ಇಂದು ಆಂಗ್ಲಭಾಷೆಯನ್ನು ಬೋಧಿಸುವವರು ಸಮ್ಮೇಲನದ ಅಧ್ಯಕ್ಷರಾಗುತ್ತಾರೆ. ಇವರು ಕ್ರಿಶ್ಚನ್ ಮಿಶನರಿಗಳು ಮಾತಾಡಿದಂತೆ ಮಾತಾಡುತ್ತಾರೆ. ಬರೆಯುತ್ತಾರೆ ಇವರಂತರಂಗದಲ್ಲಿಂದ ಕನ್ನಡ ಭಾಷೆ ಹೊರಬರುವದಿಲ್ಲ. ಇವರ ನಾಲಿಗೆ ಆಂಗ್ಲಭಾಷೆ ಕಲಿಸಿ ಕುಲಗೆಟ್ಟಿದೆ. ಇಂದು ಶುದ್ಧ ಇಂಗ್ಲೀಷ ಭಾಷೆಯನ್ನಾಡುವ ಪಂಡಿತರು ನಮ್ಮ ದೇಶದಲ್ಲಿ ಎಷ್ಟೋ ಜನರಿದ್ದಾರೆ. ಇದರ ಬಗ್ಗೆ ಆಂಗ್ಲಭಾಷಾಭಿಮಾನಿಗಳು ವಿಚಾರಿಸಬೇಕು.

ಆಂಗ್ಲ ಭಾಷೆಯನ್ನು ಕೈಹಿಡಿದು ಮನೆಗೆ ಕರೆತಂದಿರುವದರಿಂದ ಕನ್ನಡ ಭಾಷೆಯ ಉದ್ಧಾರಕರ ಸೋಗನ್ನು ಹಾಕಿಕೊಂಡಿದ್ದಾರೆ. ಕೆಸರಿನಲ್ಲಿ ಸಿಕ್ಕುಬಿದ್ದ ಆನೆಯಂತೆ ಇವರ ಪರಿಸ್ಥಿತಿಯಾಗಿದೆ. ಇವರೂ ತಮ್ಮ ಮಕ್ಕಳನ್ನು ಕಾನ್‌ವೆಂಟ ಶಾಲೆಗಳಿಗೆ ಕಳಿಸುತ್ತಾರೆ. ತಮ್ಮ ಮಗ ಆಂಗ್ಲ ಭಾಷೆ ಕಲಿತು ಪಾಶ್ಚಿಮಾತ್ಯ ದೇಶಕ್ಕೆ ಹೋಗುವ ಸವಿಗನಸುಗಳನ್ನು ಕಾಣುತ್ತಾರೆ. ಇಂಥವರಿಂದ ಕನ್ನಡದ ಉದ್ಧಾರವೆಂದಾದರೂ ಆದೀತೆ ?

೬

ಸಮ್ಮೇಲನದ ವೇದಿಕೆ ಸರಸ್ವತಿ ಪುತ್ರರದು ಲಕ್ಷ್ಮಿ ಪುತ್ರರದಲ್ಲ. ರಾಜಕಾರಣಿಗಳದಂತೂ ಅಲ್ಲವೇ ಅಲ್ಲ. ಹೀಗಿದ್ದರೂ ಇಂದು ವೇದಿಕೆಯ ಮೇಲೆ ರಾಜಕಾರಣಿಗಳಿಗೆ ಮತ್ತು ಲಕ್ಷ್ಮೀ ಪುತ್ರರಿಗೆ ಹೆಚ್ಚು ಮಹತ್ವ ದೊರೆಯುವದು. ಜ್ಯೇಷ್ಠ ಸಾಹಿತಿಗಳ ಗುಂಪುಗಾರಿಕೆಯ ಮೂಲಕ ಶ್ರೀ ಬೆಟಗೇರಿಯವರಿಗೆ ಸಾಹಿತ್ಯ ಸಮ್ಮೇಲನದ

ಅಧ್ಯಕ್ಷಪದ ದೊರೆಯಲಿಲ್ಲ! ದೊರೆಯುವದಿಲ್ಲ. ಕನ್ನಡಕ್ಕಾಗಿ ದುಡಿದವರು ಮಡಿದರೂ ಈ ಸ್ಥಾನ ಅವರಿಗೆ ದೊರೆಯದು. ಶಿವಮೊಗ್ಗೆಯ ಸಮ್ಮೇಲನದ ಅಧ್ಯಕ್ಷ ಪದವು ನ್ಯಾಯದಿಂದ ಶ್ರೀ ಬೆಟಗೇರಿಯವರಿಗೆ ದೊರೆಯ ಬೇಕಾದದ್ದು ದೊರೆಯಲಿಲ್ಲ. ಪರಿಷತ್ತಿನ ಹೀನ ರಾಜ ಕಾರಣವೇ ಇದಕ್ಕೆ ಕಾರಣವಾಗಿರುತ್ತದೆ. ನಾನು ಪರಿ ಷತ್ತಿನ ಅಧ್ಯಕ್ಷರಿಗೆ ಓಲೆ ಬರೆದೆ. ಆದರೆ ಅವರು ಉತ್ತರಿಸುವ ಸಭ್ಯತೆಯನ್ನೂ ತೋರಿಸಲಿಲ್ಲ.

೧೯೮೦ ರ ಬೆಳಗಾವಿಯ ಸಮ್ಮೇಲನ ಬಂದಿತು. ನಾನು ಬೆಟಗೇರಿಯವರಿಗೆ ಅಧ್ಯಕ್ಷ ಸ್ಥಾನ ದೊರೆಯ ಬೇಕೆಂದು ಪರಿಷತ್ತಿನ ಅಧ್ಯಕ್ಷರಿಗೆ ಓಲೆ ಬರೆದೆ. ಇದು ನ್ಯಾಯಬದ್ಧವಾದ ಬೇಡಿಕೆ. ಕನ್ನಡ ಜನಮನದ ಬೇಡಿಕೆ. ಶ್ರೀ ಶ್ರೀ ಅಧ್ಯಕ್ಷರು ಪರಂಪರೆಗೆ ತಕ್ಕಂತೆ ನನಗೆ ಸಮ ರ್ಪಕವಾಗಿ ಉತ್ತರಿಸಿದೆ. ದೊಡ್ಡಿಸ್ತನದ ಪ್ರದರ್ಶನ ಮಾಡಿದರು. ನಾನು ಅವರಿಗೆ ನಾಲ್ಕು ಓಲೆಗಳನ್ನು ಬರೆದು ಅಧ್ಯಕ್ಷರನ್ನು ಅಹಂಭಾವದ ಉಪ್ಪರಿಗೆಯಲ್ಲಿಂದ ನೆಲದ ಮೇಲೆ ತಂದು ನಿಲ್ಲಿಸಿದರು. ನಾನು ಕೇಳಿದ ಪ್ರಶ್ನೆ ಗಳಿಗೆ ಅಧ್ಯಕ್ಷರು ಉತ್ತರಿಸಲಿಲ್ಲ. ಉತ್ತರಿಸುವ ಎದೆ ಗಾರಿಕೆ ಅವರಿಗಿಲ್ಲ. ಶ್ರೀಯುತರು ಅನೇಕರ ಮುಂದೆ ಶ್ರೀ ಬೆಟಗೇರಿಯವರು ಅನಾರೋಗ್ಯದಿಂದ ಬಳಲು ತ್ತಿದ್ದಾರೆ. ಆದ್ದರಿಂದ ಅವರಿಗೆ ಅಧ್ಯಕ್ಷಸ್ಥಾನ ಸಲ್ಲದು. ಎಂದು ಕೀಳುನುಡಿಗಳನ್ನಾಡಿಕೊಳ್ಳ ಹತ್ತಿದರು.

ಕೂಡಲೇ ನಾನು ಶ್ರೀ ಬೆಟಗೇರಿಯವರನ್ನು ಕಂಡು ಅಧ್ಯಕ್ಷ ಸ್ಥಾನದ ಬಗ್ಗೆ ಚರ್ಚಿಸಿದೆ.

ಕನ್ನಡ ಜನತೆ ನನ್ನನ್ನು ಸಾಹಿತ್ಯ ಸಮ್ಮೇಲನದ ಅಧ್ಯಕ್ಷನನ್ನಾಗಿ ಮಾಡಿದರೆ ನಾನು ಆನಂದದಿಂದ ಅಧ್ಯಕ್ಷ ಸ್ಥಾನದ ಪೀಠವನ್ನು ಅಲಂಕರಿಸುತ್ತೇನೆ."

–ಅಂಚಲ ಮನಸ್ಸಿನಿಂದ ಶ್ರೀ ಬೆಟಗೇರಿಯವ ರೆಂದರು.

"ತಾವು ಅಧ್ಯಕ್ಷಸ್ಥಾನದಿಂದ ಮಾತಾಡಬಲ್ಲಿರಾ ?"

"ಮಾತಾಡಬಲ್ಲೆ ! ನನ್ನ ಹೃದಯ ಮಂದಿರದಲ್ಲಿ ನೋಡಿದ ಸರಸ್ವತಿಯು ನನಗೆ ಮಾತಾಡುವ ಶಕ್ತಿಯನ್ನು ಕೊಡುತ್ತಾಳೆ.

–ನೋಡು, ನಾನು ಅಧ್ಯಕ್ಷನಾಗದಿದ್ದರೂ ಸರಿಯೆ ಆದರೆ ನಾನು ಈ ಪದಕ್ಕಾಗಿ ಯಾರಿಗೂ ದುಂಬಾಲ ಬೀಳುವದಿಲ್ಲ. ನಾನು ಅಧ್ಯಕ್ಷಪದಕ್ಕೆ ಅಷ್ಟೊಂದು ಮಹತ್ವವನ್ನೂ ಕೊಟ್ಟಿಲ್ಲ.' ಎಂದು ಗಂಭೀರವಾಣಿಯಲ್ಲಿ ನುಡಿದರು.

"ನಿಮಗೆ ಅಧ್ಯಕ್ಷಸ್ಥಾನವನ್ನು ಕೊಡದಿರುವದು ಅನ್ಯಾಯವಲ್ಲವೇ ?"

"ನಾನು ಅನ್ಯಾಯಗಳ ಪಕ್ವಾನ್ನಗಳನ್ನು ಉಂಡು, ನಿಂದೆಯ ಅಮೃತವನ್ನು ಕುಡಿದು ಅಮರನಾಗಿದ್ದೇನೆ. ಈ ನಶ್ವರ ದೇಹವು ನನ್ನ ಅಸ್ತಿತ್ವವನ್ನು ತೋರಿಸು ತ್ತಿದ್ದರೂ ನಾನು ಸ್ಥಿತಪ್ರಜ್ಞನಾದಿದ್ದೇನೆ.

–ಇದೂವರೆಗೆ ನಾನು ಸರಸ್ವತಿಯ ಭಕ್ತನಾಗಿ ಸಾಧಕನಾಗಿ ಜೀವನವನ್ನು ನೂಕಿದ್ದೇನೆ. ಇದರಲ್ಲಿಯೇ ನನ್ನ ಜೀವನದ ಸಾರ್ಥಕತೆ ಇದೆಯೆಂದು ನಾನು ಬಗೆದಿ ದ್ದೇನೆ. ಸರಸ್ವತಿಯ ಸೇವೆಯಲ್ಲಿಯೆ ಜೀವನದ ಕೊನೆ ಯುಸಿರನ್ನೆಳೆದು ಕೃತಾರ್ಥನಾಗಬಯಸುತ್ತೇನೆ.'

ಎಂದು ಶ್ರೀ ಬೆಟಗೇರಿಯವರು ಯಾವುದೆ ಭಾವೋದ್ವೇಕಕ್ಕೆ ಹಾರವಾಗಿ ಹೋಗದೆ ಅಂದರು.

ನಾನು ಬೆಟಗೇರಿಯವರ ಮಾತುಗಳನ್ನು ಕೇಳಿ ಆನಂದಪಟ್ಟೆನು. ಬೆಟಗೇರಿಯವರ ಈ ಅಮರವಾಣಿ ಯನ್ನು ಪರಿಷತ್ತಿನ ಅಧ್ಯಕ್ಷರಿಗೆ ತಿಳಿಸಿದೆನು. ಸರಸ್ವತಿಯ ಭಕ್ತರಾಗಿರದ ಅಧ್ಯಕ್ಷರಿಗೆ ಏನೆನಿಸಿತೊ ?

ಜಾತಿಯತೆಯ ಕೈವಾಡದಿಂದ ತುಂಬಿದ ಬೆಳ ಗಾವಿಯ ಸಮ್ಮೇಳನವು ದುರಂತದಲ್ಲಿ ಕೊನೆಗೊಂಡಿ ತ್ತಲ್ಲದೇ ಅಧ್ಯಕ್ಷರ ಯೋಗ್ಯತೆಯು ಬೆಳಗಾವಿಯ ಜನತೆಗೆ ತಿಳಿದು ಬಂದಿತು.

ಧಾರವಾಡ ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಮತ್ತು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಶ್ರೀ ಬೆಟಗೇರಿ ಯವರ ಮನೆಗೆ ಹೋಗಿ ಅವರನ್ನು ಸತ್ಕರಿಸಿದ ಸುದ್ದಿ ಯನ್ನು ನಾನು ವೃತ್ತ ಪತ್ರಿಕೆಯಲ್ಲಿ ಓದಿದೆ-ಇವರಂತಹ ಮೋಸಗಾರರು ಇನ್ನೊಂದಿಲ್ಲ – ಧಾರವಾಡದವರು ಬೆಟಗೇರಿಯವರ ಬಗ್ಗೆ ಇನ್ನೂ ಏನೇನು ಮಾಡುವದನ್ನು ನಿರ್ಧರಿಸಿರುವರೊ ತಿಳಿಯದು. ಇದು ಶ್ರೀ ಬೆಟಗೇರಿ

ಯುವರ ಸತ್ಕಾರವಲ್ಲ ! ಇದು ಬೆಟಗೇರೀಯವರ ಜಾಹೀರ ನಿಂದೆ ! ಅವಮಾನ ! ಎಂದು ತಿಳಿದವರು ಅರ್ಥ ಮಾಡಿ ಕೊಳ್ಳುತ್ತಾರೆ. ನೈತಿಕಧೈರ್ಯವಿರದ ಈ ಮಹನೀಯರು ಬೆಟಗೇರಿಯವರ ಎದುರಿನಲ್ಲಿ ಮುಖತಗ್ಗಿಸಿ ಕುಳಿತು ಕೊಂಡರು. ಮನೆಯವರೆಗೆ ಹೋಗಿ ಸಾಹಿತಿಗಳನ್ನು ಸತ್ಕರಿಸುವ ಕುತಂತ್ರವು ಜನರ ಕಣ್ಣಲ್ಲಿ ಮಣ್ಣೆರಚುವ ಅಧುನಿಕ ಸಭ್ಯತನವಾಗಿರುವದು.

ಎರಡುವಾರಗಳ ತರುವಾಯ ನಾನು ಶ್ರೀ. ಬೆಟಗೇರಿಯವರಿಗೆ ಭೆಟ್ಟಿಯಾದೆನು.

'ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಮತ್ತು ಜಿಲ್ಲಾ ಧ್ಯಕ್ಷರು ಮನೆಯವರೆಗೆ ಬಂದು ನಿಮ್ಮನ್ನು ಸತ್ಕರಿಸಿದ ರಂತೆ ! ಅಹುದೆ ? ', ಎಂದು ಮಾತಿಗಾರಂಭಿಸಿದೆನು.

'ಅಹುದು ಇದು ನನಗೆ ಸಮ್ಮತವಿಲ್ಲದಿದ್ದರೂ-ಒಪ್ಪಿದೆ'

'ಏಕೆ ?'

'ನಾನು ಗೃಹಸ್ಥ-ಮನೆಗೆ ಬಂದವರ ಸ್ವಾಗತವನ್ನು ಬಯಸುವದು ನನ್ನ ಧರ್ಮ, ಮನೆಗೆ ಬಂದರು-ಹೋದರು, ನಾನು ಎರಡೂ ಘಟನೆಗಳಿಗೆ ಮಹತ್ವ ಕೊಟ್ಟಿಲ್ಲ.

'ಪರಿಷತ್ತಿನವರು, ಧಾರವಾಡದವರು ನಿಮಗೆ ಮರ್ಯಾದೆಯನ್ನು ಕೊಡದಿರುವಾಗ ನೀವೇಕೆ ಅವರಿಗೆ-ಮರ್ಯಾದೆಯನ್ನು ಕೊಡುವಿರಿ ? '

'ಇವರಲ್ಲಿಯೆ ಭಾರತೀಯ ಸಂಸ್ಕೃತಿಯ ಮಹತ್ವವು ಅಡಕವಾಗಿದೆ.'

ನಿಂದಕರಿಗೆ—ಅನ್ಯಾಯವೆಸಗುವವರಿಗೆ ಬೆಟಗೇರಿ ಯವರ ವಿಶಾಲ ಹೃದಯದ ಕಲ್ಪನೆಯಿದೆ. ಅವರ ಪಾಂಡಿತ್ಯದ ಅರಿವಿದೆ. ಈ ಜನರು ಬೆಟಗೇರಿಯವರ ಪಾಂಡಿತ್ಯವನ್ನು ದ್ವೇಷಿಸುವರು. ಧಾರವಾಡದ ಸಾಹಿತಿ ಗಳು ಬೆಟಗೇರಿಯವರ ಮೇಲೆ ಅನ್ಯಾಯದ ಸುರಿಮಳೆ ಯನ್ನು ಸುರಿಸಿದ್ದಾರೆ. ಭವಭೂತಿಯ ಅವಸ್ಥೆಯಂತೆ-ಶ್ರೀ ಬೆಟಗೇರಿಯವರ ಅವಸ್ಥೆಯನ್ನು ಮಾಡಿದವರು ಧಾರವಾಡದ ಬ್ರಾಹ್ಮಣರು. ಶ್ರೀ ಬೆಟಗೇರಿಯವರು ಧಾರವಾಡದ ಹಿರಿ-ಕಿರಿಯ ಸಾಹಿತಿಗಳ ಕರಡು ಪ್ರತಿ ಗಳನ್ನು ತಿದ್ದಿದ್ದಾರೆಂಬುದನ್ನು ಧಾರವಾಡದ ಸಾಹಿತಿಗಳು ಇಷ್ಟರಲ್ಲಿಯೇ ಮರೆತರೇನು ?

ಶ್ರೀ ಬೆಟಗೇರಿಯವರು ಕನ್ನಡಿಗರ ಕಾಮಧೇನು. ಅನೇಕರು ತಾವರಿಯದ್ದನ್ನು 'ಬೆಟಗೇರಿಯವರಿಂದ ಅರಿತುಕೊಳ್ಳುತ್ತಾರೆ. ಪುಣೆಯಿಂದ ಬೆಟಗೇರಿಯವ ರಲ್ಲಿಗೆ ಬಂದವರೋರ್ವರು, ಬೆಟಗೇರಿಯವರು ಕಲ್ಪ ವೃಕ್ಷದಂತಿದ್ದಾರೆ.' ಎಂದು ಬಿಚ್ಚು ಮನಸ್ಸಿನಿಂದ ಅಂದರು. ಬೆಟಗೇರಿಯವರು ದಾಸಸಾಹಿತ್ಯದ ಅಭ್ಯಾಸ ಮಾಡಿದಂತೆ ಭಾಗವತ ಸಾಹಿತ್ಯದ ಆಳವಾದ ಅಭ್ಯಾಸ ವನ್ನು ಮಾಡಿದ್ದಾರೆ. ಜ್ಞಾನೇಶ್ವರ, ತುಕಾರಾಮ, ನಾಮದೇವ ಮತ್ತು ಏಕನಾಥರ ಸಾಹಿತ್ಯದ ಮೇಲೆ ಅಧಿಕಾರವಾಣಿಯಿಂದ ಮಾತಾಡಬಲ್ಲ ಏಕಮೇಯ ಕನ್ನಡಿ ಗರು-ಶ್ರೀ. ಬೆಟಗೇರಿಯವರು.

ಕನ್ನಡ ಜನಪದ ಸಾಹಿತ್ಯವನ್ನು ಆಳವಾಗಿ ಅಭ್ಯಾ ಸಿದವರಲ್ಲಿ ಶ್ರೀ ಬೆಟಗೇರಿಯವರು ಹಿರಿಯರು. ಜನ ಪದ ಭಾಷೆಗೊಂದು ಪರಂಪರೆಯಿದೆ. ಶೈಲಿಯಿದೆ, ಭಾಷೆಗೊಂದು ವ್ಯಾಕರಣವಿದೆ ಎಂದು ಅವರು ಅಭಿ ಪ್ರಾಯ ಪಡುತ್ತಾರೆ. ಹಿರಿ-ಕಿರಿ ಸಾಹಿತಿಗಳು ಜನಪದ ಸಾಹಿತ್ಯದ ಸಂಶೋಧನೆ ಮಾಡುವವರು ಜನಪದ ಜೀವನದ ಅಭ್ಯಾಸವಮಾಡಬೇಕು. ಎಂದು ಶ್ರೀಯುತರು ಅಭಿಪ್ರಾಯ ಪಡುತ್ತಾರೆ. ಬೆಟಗೇರಿಯವರ 'ನಲ್ವಾಡು ಗಳು' ಈ ಕವನ ಸಂಕಲನವು ಅವರ ಜನಪದ ಜೀವನ ಬಗ್ಗೆ ಇರುವ ಅಭ್ಯಾಸ ಮತ್ತು ಜ್ಞಾನಗಳನ್ನು ಎತ್ತಿ ತೋರಿಸುತ್ತದೆ.

'ಕವಿಭೂಷಣ' ಎಂಬ ಬಿರುದನ್ನು ಶ್ರೀ ಬೆಟಗೇರಿ ಯವರು ಸಾರ್ಥಕಗೊಳಿಸಿದ್ದಾರೆ. ಇವರ ಕಾವ್ಯದಲ್ಲಿ ಪಾಶ್ಚಿಮಾತ್ಯರ ಅನುಕರಣೆ ಕಾಣದು. ಆದ್ದರಿಂದ ಇವರ ಕಾವ್ಯವು ಸತ್ವಯುತವಾಗಿರುವದು. ಕನ್ನಡ ಕವಿ ಗಳಿಂದಲೆ ಸ್ಫೂರ್ತಿ ಪಡೆದು ಇವರು ಕಾವ್ಯರಚಿಸಿದ್ದಾರೆ. ಆದ್ದರಿಂದ ಇವರ ಕಾವ್ಯದಲ್ಲಿ ಈ ನಾಡಿನ ಮಣ್ಣಿನ ವಾಸನೆ ಬರುತ್ತದೆ. ಕವಿಭೂಷಣರದು ಭಾರತೀಯ ಅಂತರಂಗ. ಭಾರತೀಯ ದೃಷ್ಟಿಕೋನ. ಕನ್ನಡದ ಕೆಚ್ಚು ! ಇವೆಲ್ಲ ಇವರ ಅರುಣೋದಯ, ವಿರಹಿಣಿ, ಕಾರಹುಣ್ಣಿವೆ, ನಲ್ವಾಡುಗಳು ಮತ್ತು ಉತ್ಸಾಹಗಾಥಾ ಮೊದಲಾದ ಕವನ ಸಂಕಲನಗಳಲ್ಲಿ ಹಾಸುಹೊಕ್ಕಾಗಿವೆ. ಇವರು ಭೌತಿಕವಾದವ ಅನುಯಾಯಿಗಳಲ್ಲ. ನಿರಾಶಾ

ವಾದಿಗಳಲ್ಲಿ. ಆಶಾವಾದಿ ಕವಿಗಳು.

ಶ್ರೀ ಬೆಟಗೇರಿಯವರು ಜನಪದ ರಸಋಷಿಗಳು ಕವಿಭೂಷಣರು. ಜ್ಯೇಷ್ಠ ಪತ್ರಕಾರರು, ಶ್ರೇಷ್ಠ ಕತೆ-ಕಾದಂಬರಿಕಾರರು, ಇತಿಹಾಸ ಸಂಶೋಧಕರು, ದೇಶ ಭಕ್ತರು, ವೈಯಾಕರಣಿಗಳು. ವಾಗ್ಮಿಗಳು, ನಾಡನುಡಿದಾಗಿ ಸೇವೆ ಸಲ್ಲಿಸಿದವರು, ವ್ಯಾಕರಣಾಲಂಕಾರ ಪಂಡಿತರು, ದಾಸಸಾಹಿತ್ಯಪರಿಣಿತರು. ಈ ಹೆಗ್ಗಳಿಕೆ ಶ್ರೀ ಬೆಟಗೇರಿ ಕೃಷ್ಣಶರ್ಮರದು.

ಸಂಕಟಗಳು ಮುಪ್ಪಿನ ಕಾಲದಲ್ಲಿಯೂ ಇವರ ಬೆನ್ನು ಬಿಟ್ಟಿಲ್ಲ. ಶ್ರೀಯುತರು ಈಗ ಅರ್ಧಾಂಗವಾಯುವಿನಿಂದ ಬಳಲುತ್ತಿದ್ದಾರೆ. ಆದರೂ ಇವರ ಕನ್ನಡದ ಚೇತನ ಕಡಿಮೆಯಾಗಿಲ್ಲ. ಇನ್ನೂ ಅಸ್ಖಲಿತವಾಗಿ ಮಾತಾಡುತ್ತಾರೆ. ಓದುತ್ತಾರೆ. ದೇವರು ಶ್ರೀಯುತರಿಗೆ ಆಯುರಾರೋಗ್ಯವನ್ನು ದಯಪಾಲಿಸಲಿ ಶ್ರೀ ಬೆಟಗೇರಿ ಕೃಷ್ಣಶರ್ಮರು ಶತಾಯುಷಿಗಳಾಗಲೆಂದು ಆ ಪರಬ್ರಹ್ಮನಲ್ಲಿ ಪ್ರಾರ್ಥಿಸುತ್ತೇನೆ. ಈ ಲೇಖನದಲ್ಲಿ ನನ್ನ ವಿಷಯ ಬಂದಿರುವದು ನನ್ನ ಹೆಗ್ಗಳಿಕೆಯಲ್ಲ. ಶ್ರೀ ಕೃಷ್ಣಶರ್ಮ ಬೆಟಗೇರಿಯವರ ಯೋಗ್ಯತೆಯನ್ನು ತಿಳಿಸಲು ಉದಾಹರಣೆಯಾಗಿ ಬಂದಿದೆ.



ಶಿವಲಿಂಗಪ್ಪ ಭಾವೀಕಟ್ಟಿ

# ಡಾ. ಬೆಟಗೇರಿ ಕೃಷ್ಣಶರ್ಮರ ಬದುಕು

ಬೆಳುವಲದ ಬದುಕು ಡಾ. ಬೆಟಗೇರಿ ಕೃಷ್ಣ ಶರ್ಮರು ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಬೆಟಗೇರಿಯಲ್ಲಿ ಕ್ರಿ. ಶ. ೧೯೦೦ ನೆಯ ಇಸ್ವಿ ಎಪ್ರಿಲ್ ೧೬ ರಂದು ಸನಾತನ ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬವೊಂದರಲ್ಲಿ ಜನಿಸಿದರು. ಶಾರ್ವರಿ ಸಂವತ್ಸರ ಅದೇ ತಾನೆ ಆರಂಭವಾಗಿತ್ತು. ಇವರ ತಂದೆ ಜೋತಿಷ್ಯ ವನ್ನು ಬಲ್ಲ ಪಂಡಿತರು. ನಮ್ಮ ಮನೆ ಬೆಳಗುವ ಕೀರ್ತಿ ಶಾಲಿ ವ್ಯಕ್ತಿ ಇವನಾಗುತ್ತಾನೆಂದು ಇವರ ತಂದೆ ಮೇಲಿಂದ ಮೇಲೆ ಹೇಳುತ್ತಿದ್ದರಂತೆ.

ಕವಿಭೂಷಣ ಬೆಟಗೇರಿ ಕೃಷ್ಣಶರ್ಮರ ಜೀವನವೇ ಒಂದು ವಿಸ್ಮಯ. ಚಿಕ್ಕವನಿದ್ದಾಗ ಬಚ್ಚಲು ಮೋರೆ ಯಲ್ಲಿ ಬಿದ್ದು ಮುಳುಗಿ ಹೋದಾಗ ಜನ ಮಗು ಸತ್ತು ಹೋಯಿತೆಂದು ಹಾಹಾಕಾರ ಮಾಡುವಾಗ ಇವರು ಅನಿರೀಕ್ಷಿತವಾಗಿ ಸಾವಿನ ದವಡೆಯಿಂದ ಬದುಕಿ ಉಳಿ ದರು. ಜಾಗತಿಕ ಮೊದಲ ಮಹಾಯುದ್ಧ ಅದೇ ತಾನೆ ಆರಂಭಗೊಂಡಿತ್ತು. ಚಳಿಜ್ವರ ಭಯಂಕರ ಸ್ವರೂಪಿ ಯಾಗಿ ಹಬ್ಬಿಕೊಂಡಿತ್ತು. ಚಳಿಜ್ವರ ಅಂಟಿಕೊಂಡು ಸಾವು ಬದುಕಿನ ಹೋರಾಟದಲ್ಲಿ ಬದುಕಿ ಉಳಿದು ಯಶಸ್ವಿ ಯಾದರು. ಮರುವರ್ಷ ಪ್ಲೇಗು ಹರಡಿಕೊಂಡು ಆ ರೋಗಿಗೆ ತುತ್ತಾದರು. ಎದೆ ನಡುಗಿಸುವ ಪ್ಲೇಗು ಹಳ್ಳಿಯಲ್ಲಿ ಇಪ್ಪತ್ತು ಮೂವತ್ತು ಜನರನ್ನು ಬಲಿತೆಗೆದು ಕೊಳ್ಳುತ್ತಲಿತ್ತಂತೆ. ಇಂತಹ ವಿಷಮ ಪರಿಸ್ಥಿತಿಯಲ್ಲಿ ಆನಂದಕಂದರು ಬದುಕಿ ಉಳಿದರು. ಆಗ ಇವರ ಮನೆಗೆ ಬಂದ ಮೂಡಲಗಿಯ ಸ್ವಾಮಿಗಳು ರೋಗಿಯ ಹಣೆಗೆ ವಿಭೂತಿ ಹಚ್ಚಿ ಚಿಂತಾಕ್ರಾಂತ ಮನೆಯವರಿಗೆ ಹೀಗೆಂದರಂತೆ: "ಪ್ಲೇಗು ಅಂಟಿದವರು ಬದುಕುತ್ತಾರೊ, ಇಲ್ಲವೊ ದೇವರಿಗೆ ಗೊತ್ತು. ಆದರೆ ಈತನು ಮಾತ್ರ ಬದುಕಿ ಉಳಿಯುತ್ತಾನೆ." ಸ್ವಾಮಿಗಳ ಆಶೀರ್ವಾದ ವೆಂಬಂತೆ ಮಗು ಬೆಟಗೇರಿಯವರು ಬದುಕಿದರು.

ಆನಂದಕಂದರು ೧೯೨೮ರಲ್ಲಿ ದೇವುಡು ಅವರ ಅಪೇಕ್ಷೆಯಂತೆ ಬೆಂಗಳೂರಿನ ಆರ್ಯ ವಿದ್ಯಾಶಾಲೆಯಲ್ಲಿ ಕಾರ್ಯಮಾಡುತ್ತಿದ್ದರು, ಆಗ ಇವರ ಗೈರುಹಾಜರಿ ಯಲ್ಲಿ ಇವರಣ್ಣ ಶ್ರೀ ಬಲರಾಮಪ್ಪನವರು (ಶ್ರೀ ಬೆಟ ಗೇರಿಯವರಿಗೆ) ಇವರಿಗೆ ಹೆಣ್ಣು ಗಟ್ಟಿಮಾಡಿ ತಂತಿಯ ಮೂಲಕ ಬೆಂಗಳೂರಿಗೆ ತಿಳಿಸಿದಾಗ ಮರುಮಾತಿಲ್ಲದೆ ಮದುವೆಯನ್ನು ಒಪ್ಪಿಕೊಂಡುದು ಇವರ ಸಜ್ಜನಿಕೆಯ ಪ್ರತೀಕ. ಹೆಣ್ಣಿನ ತಂದೆ-ತಾಯಿ ಬಂಧುಬಳಗವೆಲ್ಲ ಗುಣವಂತ, ವಿದ್ಯಾವಂತ ಅಳಿಯ ಸಿಕ್ಕದ್ದು ನಮ್ಮ ಮಗಳ ಭಾಗ್ಯವೆಂದು ಹಿಗ್ಗಿಹೀರೇಕಾಯಿಯಾದರಂತೆ.

ತಮ್ಮ ಹನ್ನೆಡರನೆಯ ವಯಸ್ಸಿನಲ್ಲಿಯೇ ತಂದೆ ಯನ್ನು ಕಳೆದುಕೊಂಡು ತಬ್ಬಲಿಯಾಗಿ ಹೋರಾಡಿದ ಕಠಿಣ ಜೀವ ಆನಂದಕಂದರದು. ಜಾಣ ಸೋದರ ನನ್ನು ಕಳೆದುಕೊಂಡು ವಿಧವೆ ಅಕ್ಕ-ಅತ್ತಿಗೆಯರಿಗೆ ದಾರಿದೀಪವಾಗಿ ಅವರ ಕೈಹಿಡಿದು ಮುನ್ನಡಿಸಿದ ಧೀರ ವ್ಯಕ್ತಿತ್ವ ಇವರದು. ಪ್ಲೇಗಿನಂತಹ ಕ್ರೂರಭೀಕರ ರೋಗಿನ ದವಡೆಗೆ ಸಿಲುಕಿ ಕೆಲಕಾಲ ಅಂಧತ್ವವನ್ನೂ ಬಧಿ ರತ್ವವನ್ನೂ ಅನುಭವಿಸಬೇಕಾಗಿ ಬಂದಿತು. ಬಡತನದ ಕರ್ಣಕಠೋರ ಪರಿಸ್ಥಿತಿಯ ತೀವ್ರತೆ ಇವರನ್ನು ಬಹಳಷ್ಟು ನೋಯಿಸಿ ಘಾಸಿಗೊಳಿಸಿತು. ಹೀಗೆ ಅನೇಕ ಏಳು ಬೀಳುಗಳ ತೂಗುಯ್ಯಾಲೆಯಲ್ಲಿ ತ್ರಿಶಂಕು ಸ್ಥಿತಿಯನ ನುಭವಿಸಿದರು. ಇಂತಹ ಪ್ರತಿಕೂಲ ಪರಿಸ್ಥಿತಿ ಸನ್ನಿವೇಶ

ಗಳ ಸುಳಿಯಲ್ಲಿ ಸಿಲುಕಿ ಲಿವಿಲಿವಿ ಒದ್ದಾಡುತ್ತಿರುವಾಗ ಅವರಲ್ಲಿ ಕವಿತ್ವ ಪಲ್ಲವಿಸಿದ್ದೊಂದು ಪವಾಡವೇ ಸರಿ.

ತಾಯಿಯ ಮಮತೆ ತಂದೆಯ ಸಂಗೀತ ಪ್ರೇಮ ಮತ್ತು ಜ್ಯೋತಿಷ್ಯಶಾಸ್ತ್ರದ ಜ್ಞಾನ, ಹಳ್ಳಿಯ ಜಾನಪದರ ಒಡನಾಟ, ಜಾನಪದ ಪ್ರವೃತ್ತಿಗಳ ಸವಿೀಪದ ಸಂಬಂಧಗಳೆಲ್ಲ ಅವರ ಮನೋವಿಕಾಸಕ್ಕೆ ಒಳ್ಳೆಯ ರಂಗಸಜ್ಜಿಕೆಯನ್ನು ಒದಗಿಸಿಕೊಟ್ಟವೆಂದರೆ ತಪ್ಪಾಗದು. ತಾಯಿ ತೀರಿಹೋದ ವೇಲೆ ಜೀವನ ನಿರ್ವಹಣೆಗೆ ಯಾವುದಾದರೊಂದು ಉದ್ಯೋಗ ಹಿಡಿಯಲು ಬೆಳಗಾವಿಯತ್ತ ಧಾವಿಸಿ ಬಂದರು. ಪರಿಚಯದ ಶಿಕ್ಷಕರೊಬ್ಬರ ಅನಿರೀಕ್ಷಿತ ಭೆಟ್ಟಿಯಾಯಿತು. ಇವರ ಚಿಂತಾಜನಕ ಸ್ಥಿತಿಯನ್ನು ಕೇಳಿ ಮನಸ್ಸು ಕರಗಿ ಶಿಕ್ಷಕ ಕೆಲಸ ಕೊಡಿಸಲು ಆ ಶಿಕ್ಷಕರು ಮುಂದಾದರು. ಆ ಶಿಕ್ಷಕ ವೃತ್ತಿಯನ್ನು ಸ್ವೀಕರಿಸಬೇಕೆಂದು ನಿರ್ಧರಿಸುವಾಗಲೇ ವಿಧಿ ಅದಕ್ಕೆ ಅಡ್ಡಬಂದು ಇವರನ್ನು ಬೇರೆಡೆ ಸೆಳೆದುಕೊಂಡೊಯ್ದಿತು. ತಾನೊಂದು ಬಗೆದರೆ, ದೈವವೊಂದು ಬಗೆಯುವದೆಂಬ ಗಾದೆಯಂತೆ ದೈವೀಸಂಕಲ್ಪವೇ ಬೇರೆಯಾಗಿತ್ತು. ಜೀವನದ ನಾನಾ ತೊಂದರೆ, ತಾಪತ್ರಯಗಳ ಕವಿಯುಣಿಸಿ ದಿಟ್ಟಹೋರಾಟಕ್ಕೆ ಅಣಿಗೊಳಿಸಿ ಜೀವನಾನುಭವದ ಮೂಲಕ ಮಹಾಸಾಹಿತಿಯನ್ನಾಗಿ ಮಾರ್ಪಡಿಸುವ ಹಂಬಲ, ಕಾತರ ವಿಧಿಯದಾಗಿರಬೇಕು. ಆದುದರಿಂದಲೇ ದಿ. ನರಸಿಂಹಾಚಾರ, ಪುಣೇಕರ (ಕಾವ್ಯಾನಂದರು) ರ ಅಚಾನಕ ಭೆಟ್ಟಿಯಾಗಿ ಪರಿಚಯವಾಯಿತು. ಶ್ರೀ ಬೆಟಗೇರಿಯವರ ಹಸ್ತವನ್ನು ನೋಡಿ 'ನಿನಗೆ ಉಜ್ವಲ ಭವಿಷತ್ತಿದೆ. ಎಂಬ ಶುಭಾಶೀರ್ವಾದ ಮಾಡಿ ಸಂಸ್ಕೃತ ಕಲಿಯಲು ಇವರನ್ನು ಕಿತ್ತೂರಿಗೆ ಕರೆದೊಯ್ದರು. ಈ ತೆರನಾಗಿ ಇವರ ಭಾಗ್ಯದ ಬಾಗಿಲು ತೆರೆದು ಕಿತ್ತೂರಿನತ್ತ ಪ್ರಯಾಣ ಹೊರಟರು. ಕಿತ್ತೂರ ವಾಸ್ತವ್ಯ ಮೂರುನಾಲ್ಕು ತಿಂಗಳು ಅಲ್ಪಾವಧಿಯದ್ದಾದರೂ ಸಂಸ್ಕೃತದ ಅಭ್ಯಾಸ ಮಾಡಿಕೊಂಡರು. ಕಾವ್ಯಾನಂದರ ಆತ್ಮೀಯತೆ ಹೊರಜಗತ್ತಿನ ನಾನಾ ಸ್ವರೂಪ ವಿನ್ಯಾಸಗಳ ದರ್ಶನಗಳ ಮೂಲಕ ಆನಂದಕಂದರ ಜೀವನ ಪಥದಲ್ಲಿ ಮಹತ್ವದ ಬದಲಾವಣೆ ಹಾಗು ತಿರುವುಗಳು ಉಂಟಾದವು. ವಾಸ್ತವ ಲೋಕದ ದಿಕ್ಕುದೆಸೆಗಳ ಸ್ವರೂಪದರ್ಶನವಾಯಿತು.

ದಿ॥ ನರಸಿಂಹಾಚಾರ್ಯ ಪುಣೇಕರ (ಕಾವ್ಯಾನಂದರ)ರ ಆಶಯದಂತೆ ಧಾರವಾಡದಲ್ಲಿ ಸೇರಿದ ಅಖಿಲ ಕರ್ನಾಟಕ ಏಕೀಕರಣ ಪರಿಷತ್ತಿಗೆ ಸ್ವಯಂಸೇವಕರಾಗಿ ಶ್ರೀ ಬೆಟಗೇರಿಯವರು ಅಲ್ಲಿಗೆ ತೆರಳಿದರು. ಕರ್ನಾಟಕ ಏಕೀಕರಣ ಪರಿಷತ್ತು ಸರ್ವಾನುಮತದಿಂದ ಕರ್ನಾಟಕ ಸ್ವತಂತ್ರ ಪ್ರಾಂತವಾಗಬೇಕೆಂಬ ಠೀವರ್ಮಾನ ಕೈಕೊಂಡಾಗ ಇವರ ಎದೆತುಂಬಿಬಂದು 'ಕರ್ನಾಟಕ ಮಾತಾಕೀ ಜೈ' ಎಂದು ಜಯಕಾರಮಾಡಿ ನೆರೆದ ಜನರನ್ನು ಚಕಿತಗೊಳಿಸಿದರು. ಈ ಸಂದರ್ಭದ ಸದುಪಯೋಗವೆಂದರೆ ಪರಿಷತ್ತಿಗೆ ಬಂದ ಶುಭೋದಯ ಪತ್ರಿಕೆಯ ಸಂಪಾದಕ ಕೆರೂರ ವಾಸುದೇವಾಚಾರ್ಯರು, ಮಂಗಳೂರಿನ ಪ್ರತಿನಿಧಿ ಡಿ. ಕೆ, ಭಾರದ್ವಾಜ. ಓಡ್ಲಮನೆ ಆತ್ಮಾರಾಂ ಶಾಸ್ತ್ರಿ ಇವರೆಲ್ಲ ಮಹನೀಯರ ಪರಿಚಯ ಉಂಟಾಗಿ ಡಾ ಬೆಟಗೇರಿಯವರ ಮನೋಭೂಮಿಕೆಯಲ್ಲಿ ಕನ್ನಡ ನಾಡುನುಡಿಗಳ ಅಭಿಮಾನ ಗೌರವಗಳು, ರಾಷ್ಟ್ರಭಕ್ತಿಗಳೆಲ್ಲ ಮೂಡಿನಿಂತವು. ಹೀಗೆ ರಾಷ್ಟ್ರೀಯ ಸಂಗ್ರಾಮದ ಮಹಾಪ್ರವಾಹದಲ್ಲಿ ತೇಲಿ ಮುನ್ನಡೆದರು. ನಾಡು ನುಡಿಗಳ ಸೇವೆ ಹಾಗೂ ರಾಷ್ಟ್ರಭಕ್ತಿ ಭಾವಗಳು ಅವರ ಸ್ಮೃತಿಪಟಲದ ವೇಲೆ ಚಿರಂತನ ಕುರುಹಾಗಿ ಮೂಡಿ ನಿಂತವು.

೧೯೨೪ ರಲ್ಲಿ ಅಖಿಲ ಭಾರತ ಕಾಂಗ್ರೆಸ ಅಧಿವೇಶನ ಬೆಳಗಾಂವಿಯಲ್ಲಿ ಸೇರಿತ್ತು. ಪ್ರಥಮ ಬಾರಿಗೆ ಮಹಾತ್ಮಾ ಗಾಂಧೀಜಿಯವರು ಬೆಳಗಾವಿ ಕಾಂಗ್ರೆಸ ಅಧಿವೇಶನದ ಅಧ್ಯಕ್ಷರಾಗಿದ್ದರು. ಗಾಂಧೀಜಿ ಆಗಿನ್ನೂ ಖಾದಿ ಟೋಪಿ, ಅಂಗಿ ಧರಿಸುತ್ತಿದ್ದರಂತೆ. ಅಧಿವೇಶನದ ವೇದಿಕೆಯ ಮೇಲೆ ಮೌಲಾನಾ ಶೌಕತ್ ಅಲಿ ಹಾಗು ಗಾಂಧೀಜಿಯವರನ್ನು ಕಂಡು ಆನಂದಕಂದರು ಪ್ರಭಾವಿತರಾದರು. ಈ ಅಧಿವೇಶನದಲ್ಲಿ ಪ್ರಭಾವೀ ಪಾತ್ರವಹಿಸಿದ ಪ್ರಮುಖ ಕನ್ನಡಿಗರು ಮರಾಠಿ ಜಾಡಿನಲ್ಲಿಯೇ ಅಧಿವೇಶನದ ಕಾರ್ಯಕ್ರಮಗಳನ್ನು ನಡೆಸಿದಾಗ ಡಾ. ಬೆಟಗೇರಿಯವರ ಕನ್ನಡಾಭಿಮಾನ ಹೆಡೆಯೆತ್ತಿ ನಿಂತುದರಲ್ಲಿ ಆಶ್ಚರ್ಯವೇನಿಲ್ಲ.

ಬೆಳಗಾವಿಯ ರಾಷ್ಟ್ರೀಯ ಶಾಲೆಯಲ್ಲಿ ಶಿಕ್ಷಕರಾಗಿ ಸೇರಿ ಅಲ್ಲಿಯ ಸ್ವರಾಜ್ಯ ಆಶ್ರಮದಲ್ಲಿ ವಾಸಿಸುತ್ತಿರುವಾಗ

ಸುತ್ತಲೂ ಕವಿದ ಮರಾಠಿ ವಾತಾವರಣವನ್ನು ಕಂಡು ಅದನ್ನು ತೊಲಗಿಸಲು ವೀರಪ್ರತಿಜ್ಞೆಗೈದರು. ಕನ್ನಡಿಗರ ನಿರಭಿಮಾನ ಹಾಗೂ ಹತಾಶ ಪ್ರವೃತ್ತಿಗಳನ್ನು ಧಿಕ್ಕರಿಸಿ ಮರಾಠಿ ವ್ಯಾಮೋಹ ದೂರ ಮಾಡಲು ಆನಂದಕಂದರು ಪ್ರಾಮಾಣಿಕ ಪ್ರಯತ್ನ ಮಾಡಿದ್ದು ಸಮಯೋಚಿತ ಕಾಣಿಕೆ.

ತಿಳಕರು ಸ್ವರಾಜ್ಯ ನಿಧಿಗಾಗಿ ಹಣಕೂಡಿಸಲು ಬೆಳಗಾವಿಗೆ ಬಂದಾಗ ಅಚ್ಚಗನ್ನಡ ಮುಖಂಡರು ಮರಾಠಿಯಲ್ಲಿ ಹಾಡತೊಡಗಿದಾಗ ಆನಂದಕಂದರ ಕರುಳು ಕಿವುಚಿದಂತಾಗಿ ಕನ್ನಡಿಗರ ಹತಾಶ ಪ್ರವೃತ್ತಿಗೆ ಮಮ್ಮಲಮರುಗಿದರು. ಮರು ದಿನ ಕನ್ನಡಪದ್ಯ ರಚಿಸಿ, ಕನ್ನಡ ಹಾಡು ಮಾರ್ದನಿ ಗೈಯುವಂತೆ ಮಾಡಿದರು.

"ಭಿಕ್ಷೆಯ ನೀಡಿ ಬಾಂಧವರೆ-ನೀವ್
ಭಿಕ್ಷೆಯ ನೀಡಿಂ ಭಗಿನಿಯರೆ !"

ಆನಂದಕಂದರು ರಚಿಸಿದ ಈ ಕನ್ನಡ ಗೀತೆ ಎಲ್ಲರನ್ನೂ ಆಕರ್ಷಿಸಿ ಮನಸ್ಸನ್ನು ಸೂರೆಗೊಂಡು ಮರಾಠಿಜನರೂ ಹಾಡಿ ಆನಂದಿಸುವಂತಾಯಿತು, ಬೆಳಗಾವಿ ಎಂದೆಂದಿಗೂ ಅಚ್ಚುಗನ್ನಡ ಪ್ರದೇಶವೆಂದು ರಾಷ್ಟ್ರೀಯ ಮಹಾಸಭೆ ಸಾರಿಹೇಳಿದ್ದರೂ ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಸಮಿತಿಯ ವತಿಯಿಂದ ನಡೆಸಲ್ಪಡುತ್ತಿದ್ದ ಬೆಳಗಾವಿಯ ರಾಷ್ಟ್ರೀಯ ಶಾಲೆಯಲ್ಲಿ ಮರಾಠಿ ಗೀತಗಳಿಗೇ ಹೆಚ್ಚಿನ ಅವಕಾಶವಿದ್ದುದನ್ನು ಅರಿತ ಬೆಟಗೇರಿಯವರ ಕರುಳು ಕಿವುಚಿದಂತಾಯಿತು. ರಾಷ್ಟ್ರೀಯ ಶಾಲೆಯ ಶಿಕ್ಷಕರಾದ ಇವರು ಕನ್ನಡ ಹಾಡೊಂದನ್ನು ರಚಿಸಿಕೊಟ್ಟರು.

ನಾನಿದನೆ ಹಾಡುವೆನು ಹಾಡು—
"ನನ್ನದು ಈ ಕನ್ನಡ ನಾಡು."

ಈ ಗೀತವು ಕನ್ನಡಿಗರ ಅಭಿಮಾನವನ್ನು ಕೆಣಕಿನಿಂತಿತು. ಭವ್ಯ ಪರಂಪರೆಯ ಅರಿವು ಮೂಡಿಸಿತು ಹೀಗಾಗಿ ಕನ್ನಡ ನುಡಿಯ ನಾದ ಮಾಧುರ್ಯ ಹಾಗೂ ಕನ್ನಡ ಭಾಷೆಯ ಹಿರಿಮೆಯನ್ನುಸುರುವ ಮತ್ತೊಂದು ಗೀತವನ್ನು ಆನಂದಕಂದರು ರಚಿಸಿಕೊಟ್ಟರು.

"ಎನಿತು ಇನಿದು ಈ ಕನ್ನಡ ನುಡಿಯು ?
ಮನವನಂ ತಣಿಸುವ ಮೋಹನ ಸುಧೆಯು !"

ಈ ಗೀತೆ ಕನ್ನಡದ ಪ್ರಚಂಡ ಅಲೆಯನ್ನೆಬ್ಬಿಸಿತು. ಬೆಳಗಾವಿಯ ರಾಷ್ಟ್ರೀಯ ಶಾಲೆಯಲ್ಲಿ ಅವಿತೋತ್ಸಾಹ ಮೂಡಿಸಿತು ಇಡೀ ಶಾಲೆ ಕನ್ನಡಮಯವಾಯಿತು. ಮರಾಠಿ ವಿದ್ಯಾರ್ಥಿಗಳೂ ಈ ಗೀತೆಯನ್ನು ಸುಶ್ರಾವ್ಯವಾಗಿ ಹಾಡುವಂತೆ ಮಾಡಿತು.

"ರಕ್ಷಿಸು ಕರ್ನಾಟಕ ದೇವಿ" ಈ ಪದ್ಯವು ರಾಷ್ಟ್ರೀಯ ಶಾಲೆಯ ದೈನಂದಿನ ಕಾರ್ಯಕ್ರಮದಲ್ಲಿ ಸೇರಿಕೊಂಡಿತು. ಇದರಿಂದಾಗಿ ಬೆಳಗಾವಿಯಲ್ಲಿ ಮೂಡಿನಿಂತ ಮರಾಠಿಯ ಅನಾರೋಗ್ಯಕರ ವಾತಾವರಣ ತೊಲಗಿ ಕನ್ನಡದ ಕೂಗು ಸಾರ್ವತ್ರಿಕ ಧ್ವನಿಯಾಗುವಂತಾಯಿತು. ರಾಷ್ಟ್ರೀಯ ಶಾಲೆಯಲ್ಲಂತೂ ಕನ್ನಡ ಮನೆಮಾತಾಗಿ ಹಿಂದಿನ ಮರಾಠಿ ಪರಂಪರೆ ಕಣ್ಮರೆಯಾಯಿತು. ಹೀಗೆ ಬೆಟಗೇರಿಯವರು ಅಂದಿನ ರಾಷ್ಟ್ರೀಯ ಮಹಾಸಂಗ್ರಾಮದಲ್ಲಿ ಪಾಲ್ಗೊಂಡು ತನುಮನಧನಗಳಿಂದ ನಾಡುನುಡಿಗಳ ಸೇವೆಗೈದು ಕೃತಾರ್ಥರಾದರು.

ಆನಂದಕಂದರು ಸಾಹಿತ್ಯ ರಾಜಕೀಯ ಕಾರಣಗಳಿಂದ ಆರ್ಥಿಕ ಮುಗ್ಗಟ್ಟಿನಿಂದಾಗಿ ಬೇಸತ್ತು ಮತ್ತೆ ತಮ್ಮೂರಿಗೆ ಹೋಗಿ ನೆಲೆಸಿದಾಗ, ಕರ್ನಾಟಕದ ಹೆಸರಾಂತ ಸಂಶೋಧಕ ಸಾಹಿತಿ ಡಾ॥ ಶಂ. ಬಾ. ಜೋಶಿಯವರ ಒತ್ತಾಯಕ್ಕೆ ಮಣಿದು ಮತ್ತೆ ಇವರ ಪ್ರಯಾಣ ಧಾರವಾಡದತ್ತ. ಧಾರವಾಡದಲ್ಲಿ ಜಯಂತಿಯ ಸಂಪಾದಕರಾಗಿ ಇಪ್ಪತ್ತೊಂಬತ್ತು ವರ್ಷಗಳ ಅಖಂಡ ಸೇವೆ ಸಲ್ಲಿಸಿ ಸಮರ್ಥ ಸಂಪಾದಕರೆನೆಸಿಕೊಂಡರು. ಈ ಅವಧಿಯಲ್ಲಿ ಆರೋಗ್ಯದ ಹಿಂಜರಿತ ಹಾಗೂ ಹಣದ ತೊಂದರೆ, ಮಗಳ ಮತ್ತು ಹೆಂಡತಿಯ ಸಾವಿನಂತಹ ದುರಂತಗಳು ಸಂಭವಿಸಿದರೂ ಜಯಂತಿ ಪತ್ರಿಕೆಯಿಂದ ದೂರ ಉಳಿಯಲಿಲ್ಲ. ಇದರಿಂದ ಬೆಟಗೇರಿಯವರು ಎಂತಹ ಎದೆಗಾರರು. ಸ್ಥಿತಪ್ರಜ್ಞರೆಂಬುದರ ಅರಿವಾಗುವದು.

ಆನಂದಕಂದರು ಸಾಮಾಜಿಕ ಕಳಕಳಿಯ ವಾಸ್ತವವಾದಿ ಎಂಬುದಕ್ಕೆ ಅವರ ಕುಟುಂಬದ ಚಿಕ್ಕ ಘಟನೆಯನ್ನು ಉದಾಹರಿಸಬಹುದು. ಅರವತ್ತರ ಗಡಿದಾಟಿಹೋದ ಅವರ ಹಿರಿಯಣ್ಣ ಮುಧೋಳದ ಆಚಾರ್ಯರೋರ್ವರ ಹನ್ನೊಂದು ವರ್ಷದ ಕನ್ಯೆಯನ್ನು ಮದುವೆ ಮಾಡಿಕೊ

ಳ್ಳಲು ಮುಂದಾದಾಗ ಚಿಕ್ಕವರಾದ ಬೆಟಗೇರಿಯವರು ದಾರಿತಪ್ಪಿ ಮುಗ್ಗರಿಸುವ ಸ್ಥಿತಿಯಲ್ಲಿದ್ದ ಅಣ್ಣನಿಗೆ ಬುದ್ಧಿವಾದ ಮಾಡಿ ಅನಾಹುತವನ್ನು ತಪ್ಪಿಸಿದರು. ಇದು ಅವರ ಕಾಳಜಿಯನ್ನು ಎತ್ತಿತೋರಿಸುತ್ತದೆ. ಇಜ್ಜೋಡು ದಾಂಪತ್ಯ ಜೀವನ ಅನರ್ಥಕ್ಕೆಡೆಮಾಡಿಕೊಡುವದೆಂಬುದನ್ನು ಅಣ್ಣನ ಗಮನಕ್ಕೆ ತಂದು, ದೈಹಿಕ ತೃಷೆಗೆ ಕೊನೆಯಿಲ್ಲ. ಆ ಮರೀಚಿಕೆಯ ಬೆಂಬತ್ತಿ ಹಾಳಾಗುವದು ಬೇಡ; ಮತ್ತು ಓರ್ವ ಹೆಣ್ಣಿನ ಜೀವನವನ್ನು ಮಣ್ಣುಪಾಲು ಮಾಡುವದು ಬೇಡವೆಂದು ತಿಳಿ ಹೇಳಿದರಂತೆ. ಇದು ಅವರ ಸಾಮಾಜಿಕ ಕಳಕಳಿ ಹಾಗೂ ಕುಟುಂಬ ಪ್ರಜ್ಞೆಯನ್ನು ಬಿಂಬಿಸುತ್ತದೆ.

ಆನಂದಕಂದರು ಬರೆದು ಪ್ರಕಟಿಸಿರುವ ೧೩ ಕವನ ಸಂಕಲನಗಳು, ೭ ಕಥಾಸಂಕಲನಗಳು, ೬ ಕಾದಂಬರಿಗಳು, ೪ ರೂಪಕಗಳು, ೪ ವಿಮರ್ಶೆ–ಸಂಸ್ಕೃತಿ ಗ್ರಂಥಗಳು, ೪ ಜಾನಪದ ಗ್ರಂಥಗಳು, ೧೧ ಸಂಪಾದಿತ–ಕೃತಿಗಳು ಮತ್ತು ೪ ಮಕ್ಕಳ ಸಾಹಿತ್ಯ ಕೃತಿಗಳು ಕನ್ನಡ ಸಾರಸ್ವತ ಪ್ರಪಂಚದಲ್ಲಿ ಶಾಶ್ವತ ಸ್ಥಾನ ಗಳಿಸಿವೆ. ಆದ್ದರಿಂದ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಆನಂದಕಂದರಿಗೆ ಗೌರವಪೂರ್ಣವಾದ ಮಹತ್ವದ ಸ್ಥಾನವಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಯಾವ ಸ್ಥಾನಬಲ, ಪದವಿಬಲ, ವಿಶ್ವವಿದ್ಯಾಲಯಗಳ ಬೆಂಬಲವಿಲ್ಲದೆ ಸ್ವಂತ ಪರಿಶ್ರಮ ಪರಿಪಕ್ವ ಸ್ವಯಂಪೂರ್ಣ ತಾಕತ್ತಿನಿಂದ ಮೇಲೆದ್ದು ಬಂದ ಹಿರಿಯ ಜೀವ ಅವರದು. ಅಖಂಡ ಕರ್ನಾಟಕದಲ್ಲಿ ಜಾನಪದ ಸತ್ವವನ್ನರಿತುಕೊಂಡ ಏಕಮೇವಾದ್ವಿತೀಯ ವ್ಯಕ್ತಿಯೆಂಬುದಕ್ಕೆ ಎರಡು ಮಾತಿಲ್ಲ.

ಈಗ ಕವಿಭೂಷಣ ಡಾ. ಬೆಟಗೇರಿ ಕೃಷ್ಣಶರ್ಮರು ವಾರ್ಧಕ್ಯದಲ್ಲಿ ಅರ್ಧಾಂಗವಾಯುವಿನ ಹೊಡೆತದಿಂದ ಹಾಸಿಗೆ ಹಿಡಿದಿದ್ದಾರೆ. ಇಂತಹ ಅಸಹಾಯಕ ಸ್ಥಿತಿಯಲ್ಲಿಯೂ ಕನ್ನಡನಾಡು ನುಡಿಗಳಿಗಾಗಿ ಸೇವೆ ಸಲ್ಲಿಸುವ ಭಾಗ್ಯ ನನಗಿಲ್ಲದಾಯಿತೆಂದು ದುಃಖ ವ್ಯಕ್ತಪಡಿಸುತ್ತಿದ್ದಾರೆ. ಕನ್ನಡ ಸಾರಸ್ವತಲೋಕಕ್ಕೆ ಸೇವೆಸಲ್ಲಿಸುವದು ಈಗ ತಪ್ಪಿತೆಂಬ ಕೊರಗು ಅವರಿಗಿದೆ.

ರಾಮಚಂದ್ರ ಪಡವಿ

# ಬೆಟಗೇರಿ ಕೃಷ್ಣಶರ್ಮರ ಸ್ವಾಸ್ಥ್ಯ

ನಾನು ಈಗ ಬರೆಯುತ್ತಿರುವದು ಶ್ರೀ ಕೃಷ್ಣ ಶರ್ಮರ ಸ್ವಾಸ್ಥ್ಯದ ಬಗ್ಗೆ. ಕೃಷ್ಣಶರ್ಮರ ಪರಿಚಯು ಎಂದಿನಿಂದಾಯಿತೆಂಬುದು ನನಗೆ ಸರಿಯಾಗಿ ಜ್ಞಾಪಕವಿಲ್ಲ. ಅವರು ಮೊದಲಿನಿಂದಲೂ ರಾಷ್ಟ್ರೀಯ ವೃತ್ತಿಯವ ರೆಂಬುದನ್ನು ನಾನು ಕೇಳಿದ್ದೆ. ೧೯೨೩ ನೇ ಇಸ್ವಿಯ ಮಾತು. ಆಗ ನಾನು ಹುದಲಿಯಲ್ಲಿ ಒಂದು ರಾಷ್ಟ್ರೀಯ ಶಾಲೆಯನ್ನು ನಡೆಸುತ್ತಿದ್ದೆ. ಅದೇ ಕಾಲಕ್ಕೆ ಆ ಶಾಲೆ ಯಲ್ಲಿ ಕೆಲಸಮಾಡಲು ಕೃಷ್ಣಶರ್ಮರು ಹುದಲಿಗೆ ಬಂದರು. ನಾವಿಬ್ಬರೂ ಒಬ್ಬೊಂಟಿಗರಾದ್ದರಿಂದ ಇಬ್ಬರೂ ಕೂಡಿಯೇ ಇರುತ್ತಿದ್ದೆವು. ಕೂಡಿಯೇ ಅಡಿಗೆ ಊಟ ಮಾಡುತ್ತಿದ್ದೆವು. ನಾನು ಶಾಲೆಯ ಕೆಲಸವನ ಲ್ಲದೇ ತರುಣರ ಸಂಘಟನೆಯ ಕಾರ್ಯ, ಹರಿಜನ ಕಾರ್ಯ ಮೊದಲಾದವುಗಳನ್ನೂ ಮಾಡುತ್ತಿದ್ದೆ. ಹುಡು ಗರ ಜೊತೆಗೆ ಆಟ, ಕುಸ್ತಿ, ಅವರೊಂದಿಗೆ ಭಾವಿಗೆ ಸ್ನಾನಕ್ಕೆ ಹೋಗುವದು ಇವೇ ಮೊದಲಾದ ಕೆಲಸಗಳಾಗಿ ದ್ದವು. ಕೃಷ್ಣಶರ್ಮರು ಬಂದಮೇಲೆ ಶಾಲೆಯ ಕೆಲಸ ವನ್ನು ಅವರಿಗೆ ಒಪ್ಪಿಸಿ ನಾನು ಊರ ಕೆಲಸದ ಕಡೆಗೆ ಹೆಚ್ಚು ಲಕ್ಷ್ಯ ಕೊಡಹತ್ತಿದೆ. ಗಂಗಪ್ಪ ಯಮಕನಮರ್ಡಿ ಯವರು ಕೃಷ್ಣಶರ್ಮರ ಜೊತೆಗೆ ಕೆಲಸ ಮಾಡುತ್ತಿ ದ್ದರು.

ಬೆಳಿಗ್ಗೆ ಸ್ನಾನ ಉಪಹಾರ ತೀರಿಸಿಕೊಂಡು ಕೃಷ್ಣ ಶರ್ಮರು ಶಾಲೆಗೆ ಹೋಗುತ್ತಿದ್ದರು. ನಾನು ಊರೊಳಗೆ ಕೆಲಸಕ್ಕೆ ಹೋಗುತ್ತಿದ್ದೆ. ಇಬ್ಬರೂ ಕೆಲಸ ದಿಂದ ಬಂದ ಮೇಲೆ ಅಡಿಗೆ ಊಟವಾಗುತ್ತಿತ್ತು. ನಾವಿದ್ದ ಮನೆಯ ಹತ್ತಿರವೇ ಅಂಕಲಗಿ ಎಂದು ಒಬ್ಬ ಶಾಲಾ, ಮಾಸ್ತರರಿದ್ದರು. ಅವರೂ ಒಬ್ಬರೇ ಇದ್ದುದ ರಿಂದ ತಮ್ಮ ಊಟ ತೀರಿಸಿಕೊಂಡು ಹರಟೆ ಹೊಡೆಯಲಿಕ್ಕೆ ನಮ್ಮಲ್ಲಿಗೆ ಬರುತ್ತಿದ್ದರು. ಶಾಲೆಯ ಹೊತ್ತಾದ ಕೂಡಲೆ ತಮ್ಮ ತಮ್ಮ ಕೆಲಸಕ್ಕೆ ಹೋಗುತ್ತಿದ್ದರು. ರಾತ್ರಿ ಸಹ ಊಟವಾದ ಮೇಲೆ ಕೆಲವು ಜನರು ನಮ್ಮಲ್ಲಿಗೆ ಬರುತ್ತಿ ದ್ದರು. ಆಗ ಕೃಷ್ಣಶರ್ಮರು ಕೆಲವು ಹಾಡು ಹೇಳು ತ್ತಿದ್ದರು. ಹತ್ತು ಘಂಟೆಯವರೆಗೆ ಹಾಡು, ಹರಟೆ ಯಾಗಿ ಎಲ್ಲರೂ ತಮ್ಮ ತಮ್ಮ ಮನೆಗೆ ಹೋಗುತ್ತಿದ್ದರು. ಸಾಮಾನ್ಯವಾಗಿ ಇದು ನಮ್ಮ ನಿತ್ಯದ ಕಾರ್ಯಕ್ರಮ ವಾಗಿತ್ತು.

ನಾನು ಒಂದು ದಿವಸ ಹೊರಗೆ ಹೋಗದೆ ಮನೆ ಯೊಳಗೇ ಇದ್ದೆ. ಕೃಷ್ಣಶರ್ಮರು ಶಾಲೆಯಿಂದ ಬರು ವದರೊಳಗೆ ಅಡಿಗೆ ಮಾಡಿಟ್ಟರಾಯಿತು. ಮತ್ತು ಸಾಯಂ ಕಾಲ ಮತ್ತೆ ಅಡಿಗೆ ಮಾಡುವದು ಬೇಡ ಎಂದು ಎರಡೂ ಹೊತ್ತಿನ ಅಡಿಗೆ ಮಾಡಿದೆ. ಮುನ್ನಾ ದಿವಸ ಒಂದು ಕಾಲುಪಾವು ಗೋದಿ ಬೀಸಿಸಿ ತರಿಸಲಾಗಿತ್ತು. ಆ ಎಲ್ಲ ಹಿಟ್ಟಿನ ಚಪಾತಿ ಮಾಡಿದೆ. ಮಧ್ಯಾಹ್ನಕ್ಕೆ ಸಾಲುವಷ್ಟು ಅನ್ನ, ಸಾರು ಎಲ್ಲ ತಯಾರಾಯಿತು. ಕೃಷ್ಣಶರ್ಮರು ಶಾಲೆಯಿಂದ ಬಂದ ಮೇಲೆ ನಿತ್ಯದಂತೆ ಊಟಕ್ಕೆ ಕುಳಿ ತೆವು. ನಾನು ಕೃಷ್ಣಶರ್ಮರಿಗೆ ಹೇಳಿದೆ "ಇವತ್ತು ಸಾಯಂ ಕಾಲಕ್ಕೆ ಅಡಿಗೆ ಮಾಡುವದು ಬೇಡ ಎಂದು ಎರಡು ಹೊತ್ತಿನ ಅಡಿಗೆ ಮಾಡಿದ್ದೇನೆ. ಈಗ ಅನ್ನ ಮುಗಿ ಸೋಣ ಸಾಯಂಕಾಲಕ್ಕೆ ಚಪಾತಿ ಇಡೋಣ" ಎಂದು ಹೇಳಿದೆ. ಅವರು ಹಾಗೇ ಆಗಲಿ ಅಂದರು. ಅನ್ನವನ್ನೆಲ್ಲ ತೀರಿಸಿದೆವು. ಊಟ ಮುಗಿಯಿತು. ಸಾರು ಮತ್ತು

ಚಪಾತಿ ಮಾತ್ರ ಉಳಿದವು. ಕೃಷ್ಣಶರ್ಮರು ಏಳುವವರಿದ್ದರು. ಅಷ್ಟರಲ್ಲಿ ಅವರ ಎಲೆಯಲ್ಲಿ ಒಂದು ಚಪಾತಿ ಹಾಕಿದೆ. ಕೂಡಲೆ ಅವರು ನನ್ನ ಎಲೆಯಲ್ಲಿ ಎರಡು ಚಪಾತಿ ಹಾಕಿದರು. ನಾನು ಮತ್ತೆ ಅವರ ಎಲೆಯಲ್ಲಿ ಎರಡು ಚಪಾತಿ ಹಾಕಿದೆ. ಹೀಗೆ ಮಾಡಿದ ಚಪಾತಿಗಳನ್ನು ಇಬ್ಬರೂ ಇಬ್ಬರ ಎಲೆಯಲ್ಲಿ ಹಾಕಿ ಬಿಟ್ಟೆವು. ನಾನು ಕೃಷ್ಣಶರ್ಮರಿಗೆ ಅಂದೆ. 'ಇದೇನ ಮಾಡಿದಿರಿ. ಊಟ ಮುಗಿದಿದೆ. ಇಷ್ಟು ಚಪಾತಿ ಹೇಗೆ ತೀರಿಸುವದು? ಎಂದು. ಅದಕ್ಕೆ ಅವರು ನಾನೇನು ಮಾಡಲಿ ? ಮೊದಲು ನೀವೇ ಮಾಡಿದಿರಿ, ಅಂದರೂ ಹೀಗೇ ಮಾತಾಡುತ್ತ ನಗುತ್ತ ಎಲೆಯ ಮೇಲೆಯೇ ಕುಳಿತಿದ್ದೆವು. ಅಷ್ಟರಲ್ಲಿ ಅಂಕಲಗಿ ಮಾಸ್ತರರು ಬಂದು ಹೀಗೇಕೆ ನಗುತ್ತ ಕುಳಿತಿದ್ದಿರಿ. ಎಂದು ಕೇಳಿದರು. ನಾನು ನಡೆದ ಸಂಗತಿ ಹೇಳಿದೆ. ಅವರು ಎಲೆಯಲ್ಲಿ ಹಾಕಿಕೊಂಡ ಚಪಾತಿ ಚೆಲ್ಲುತ್ತಾರೆಯೆ ಎಂದು ಅಲ್ಲಿಯೇ ಇದ್ದ ತುಪ್ಪವನ್ನು ಚಪಾತಿಯ ಮೇಲೆ ಸುರುವಿದರು. ಸ್ವಲ್ಪ ಬೆಲ್ಲವನ್ನು ಹಾಕಿದರು. ಇಷ್ಟಾದ ಮೇಲೆ ಅದನ್ನೆಲ್ಲ ಚಲ್ಲುವದು ಹೇಗೆ ? ಎಷ್ಟು ಹೋಗುತ್ತದೆಯೋ ಅಷ್ಟೊಂದು ತಿಂದರಾಯಿತು ಎಂದು ತಿನ್ನಲಿಕ್ಕೆ ಪ್ರಾರಂಭ ಮಾಡಿದೆವು. ಇತ್ತ ಮಾತುಗಳು ಪ್ರಾರಂಭವಾದವು. ಮಾತಿನ ಭರದಲ್ಲಿ ಎಲ್ಲ ಚಪಾತಿ ಮುಗಿದೇ ಬಿಟ್ಟವು. ಕೃಷ್ಣಶರ್ಮರೆಂದರು 'ಆಯಿತು ಎರಡು ಹೊತ್ತಿನ ಊಟ ಈಗಲೇ ಮುಗಿಸಿ ಬಿಟ್ಟೆವು. ಸಾಯಂಕಾಲ ಏನೂ ಬೇಡ ಎಂದು. ಊಟ ಮುಗಿಯಿತು. ಎಲ್ಲರೂ ನಮ್ಮ ನಮ್ಮ ಕೆಲಸಕ್ಕೆ ಹೋದೆವು.

ಕೃಷ್ಣಶರ್ಮರು ಶಾಲೆಯಿಂದ ಬಂದ ಮೇಲೆ ಎಲ್ಲರೂ ಕೂಡಿ ತಿರುಗಾಡಲಿಕ್ಕೆ ಹೋದೆವು. ಸಾಯಂಕಾಲದ ಊಟ ಬೇಡ ಎಂದು ಮೊದಲೇ ಗೊತ್ತು ಮಾಡಿದ್ದರಿಂದ ಅಡಿಗೆ ಇರಲಿಲ್ಲ. ತಿರುಗಾಡಿ ಬಂದ ಮೇಲೆ ಹಾಡು ಹರಟೆಗಳು ಪ್ರಾರಂಭವಾದವು. ಇದು ಮುಗಿಯುವ ಹೊತ್ತಿಗೆ ಹತ್ತೂವರೆ ಗಂಟೆ ಆಯಿತು. ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋದರು. ನಾವೂ ನಮ್ಮ ಮಲಗುವ ಸಿದ್ಧತೆ ಮಾಡಿದೆವು. ಆಗ ನಾನು ಕೃಷ್ಣಶರ್ಮರಿಗೆ 'ನನಗೆ ಸ್ವಲ್ಪ ಹಸಿವಿ ಆಗೇದ' ಅಂತಾ ಅಂದೆ. ಅದಕ್ಕೆ ಅವರು 'ನನಗೂ ಆಗೇದ' ಅಂದರು. ಮನೆಯಲ್ಲಿ ಏನೂ ಇರಲಿಲ್ಲ. ಹಾಲು ಮೊಸರು ಮಧ್ಯಾಹ್ನವೇ ತೀರಿಸಿದ್ದೆವು. ಆಗ ೧೧ ಹೊಡೆಯಲಿಕ್ಕೆ ಬಂದಿತ್ತು. ಅಂಗಡಿಗಳೆಲ್ಲ ಮುಚ್ಚಿದ್ದವು. ಜನರೂ ಮಲಗಿದ್ದರು. ಆಗ ಸಿಗುವದಾದರೂ ಏನು ? ನಾನು ಕೃಷ್ಣಶರ್ಮರಿಗೆ 'ಮನೆಯಲ್ಲಿ ಸ್ವಲ್ಪ ಒಣ ಅವಲಕ್ಕಿ ಮತ್ತು ಸಾರು ಇದೆ. ಇವರ ಹೊರತು ಬೇರೆ ಏನೂ ಇಲ್ಲ. ಬೇಕಾದರೆ ಅದನ್ನೆ ಕಲಿಸಿಕೊಂಡು ತಿನ್ನೋಣ' ಎಂದು ಹೇಳಿದೆ. ಅದಕ್ಕೆ ಅವರೂ ಸಮ್ಮತಿಸಿದರು. ಅಂದು ರಾತ್ರಿ ಇಬ್ಬರೂ ಸಾರು ಅವಲಕ್ಕಿ ತಿಂದು ಮಲಗಿದೆವು. ಇದು ಅವರ ಸ್ವಾಸ್ಥ್ಯ.

ಕೃಷ್ಣಶರ್ಮರು ಬಹಳ ದಿನ ಹುದಲಿಯಲ್ಲಿ ನಿಲ್ಲಲಿಲ್ಲ. ಅವರ ವ್ಯಾಪಕ ವಿಚಾರಗಳಿಗೆ ಆ ಚಿರಕ್ಷೇತ್ರ ಹಿಡಿಸಲಿಲ್ಲವೆಂದು ಕಾಣುತ್ತದೆ. ಬೇಗನೆ ಅವರು ಹುದಲಿಯಿಂದ ಹೋದರು. ಇದೇಕಾಲಕ್ಕೆ ನಮ್ಮ ಅವರ ಗಾಢ ಪರಿಚಯುವಾದದ್ದು. ಮುಂದೆ ಇದು ಸ್ನೇಹದಲ್ಲಿ ಪರಿಣಮಿಸಿತು. ನಾನು ಧಾರವಾಡಕ್ಕೆ ಹೋದಾಗ ಅವರನ್ನು ಕಾಣದೆ ಬರುತ್ತಿದ್ದಿಲ್ಲ. ನಾನು ಭೂಗತನಿದ್ದಾಗ ಅವರ ಮನೆಗೆ ಹೋಗಿದ್ದ ವಿಷಯ 'ಕುಂದರ ನಾಡಿನಲ್ಲಿ ಒಂದು ಅಧ್ಯಾಯ' ಎಂಬ ಪುಸ್ತಕದಲ್ಲಿ ಬಂದಿದೆ.

ಇಸ್ವಿ ಸರಿಯಾಗಿ ನೆನಪಿಲ್ಲ. ಸು. ಶಿ. ದೇಶಪಾಂಡೆ ಮಾಸ್ತರರು ಆಗ ಲೋಕ ಶಿಕ್ಷಣ ಟ್ರಸ್ಟಿನ ಕಾರ್ಯದರ್ಶಿಗಳಿದ್ದರೆಂದು ಜ್ಞಾಪಕ. ಶ್ರೀ ಆರ್. ಆರ್. ದಿವಾಕರರ ಹೇಳಿಕೆಯಂತೆ ಅವರು ಹಿಂದೀ ಮಂಗಳ ಪ್ರಭಾತವನ್ನು ನನಗೆ ಭಾಷಾಂತರಿಸಲಿಕ್ಕೆ ಕೊಟ್ಟರು. ನಾನು ಈ ಮೊದಲು ಎಂದೂ ಪುಸ್ತಕವನ್ನು ಬರೆದಿದ್ದಿಲ್ಲ. ಯಾವದೇ ಪುಸ್ತಕದ ಭಾಷಾಂತರವನ್ನು ಮಾಡಿದ್ದಿಲ್ಲ. ನಾನು ಅದನ್ನು ನನಗೆ ತಿಳಿದ ಹಾಗೆ ಕನ್ನಡಕ್ಕೆ ಅನುವಾದ ಮಾಡಿದೆ. ಅದನ್ನು ಕೃಷ್ಣಶರ್ಮರಿಗೆ ತೋರಿಸಿದೆ. ಅವರು ಅದನ್ನು ಓದಿನೋಡಿ ಆನಂದದಿಂದ ತಿದ್ದುಪಡಿಮಾಡಿಕೊಟ್ಟರು.

ಕಡಲಬಾಳು, ಪ್ರಹ್ಲಾದ
ವಕೀಲರು-ಹೊಸಪೇಟೆ.

# ಬೆಟಗೇರಿ ಮಾಸ್ತರು

ಕವಿಭೂಷಣ ಕೃಷ್ಣಶರ್ಮ ಬೆಟಗೇರಿ ಅವರ ಪರಿಚಯು ನನಗಿರುವುದು "ಬೆಟಗೇರಿ ಮಾಸ್ತರ್" ಎಂದೇ. ೧೯೨೪ ನೇ ಇಸವಿಯಲ್ಲಿ ನಾನು ಧಾರವಾಡದ "ಕರ್ನಾಟಕ ರಾಷ್ಟ್ರೀಯ ಮಹಾವಿದ್ಯಾಲಯ" ಎಂಬ ಶಾಲೆಯನ್ನು ಸೇರಿದ ಮೇಲೆ, ಅವರು ಅದೇ ಶಾಲೆಯಲ್ಲಿ ಮಾಸ್ತರರಾಗಿ ಬಂದು ಸೇರಿದರು. ಆಗ ಅವರಿಗಿನ್ನೂ ಮದುವೆಯಾಗಿದ್ದಿಲ್ಲ ಆ ಶಾಲೆಯಲ್ಲಿ ಹುಡುಗರಿಗೆ ವಸತಿ ಮತ್ತು ಊಟ ಕೂಡ ಏರ್ಪಾಟು ಇದ್ದುದರಿಂದ ನಾನು ಅದೇ ಶಾಲೆಯಲ್ಲಿಯೇ ವಾಸ ಮಾಡುತ್ತಲಿದ್ದೆ. ಬೆಟಗೇರಿ ಮಾಸ್ತರು ಸಹ ವಾಸ ಮತ್ತು ಊಟ ನಮ್ಮೊಡನೆ ಮಾಡುತ್ತಲಿದ್ದರು. ಹೀಗಾಗಿ ಇಪ್ಪತ್ತು ನಾಲ್ಕು ತಾಸು ನನಗೆ ಅವರ ಸಂಪರ್ಕ, ಸಹವಾಸ ದೊರಕಿತು. ಅವರು ನಮಗೆ ಬರೇ ಮಾಸ್ತರ್ ಆಗಿ ಉಳಿಯದೇ "ಹಿರಿಯ ಅಣ್ಣ"ನಂತೆ ಅಥವಾ ತಂದೆಯಂತೆ ಆಪ್ತಬಂಧುಗಳಾದರು. ಅವರು ವಿಶೇಷವಾಗಿ ನನ್ನನ್ನು ಮತ್ತು ನನ್ನ ಇನ್ನೊಬ್ಬ ಆಪ್ತಗೆಳೆಯ (ಹೇಜಿಬ ರಾಮು) ನನ್ನು ಬಹಳ ಹಚ್ಚಿಕೊಂಡಿದ್ದರು. ಈ ಆತ್ಮೀಯತೆಯು ಪರಿಣಾಮವಾಗಿ ಅವರು ನಮ್ಮನ್ನು ಒಂದು ದೀಪಾವಳಿ ಹಬ್ಬಕ್ಕೆ ತಮ್ಮ ಸ್ವಂತ ಊರಾದ ಬೆಟಗೇರಿಗೆ ಕರೆದೊಯ್ದರು. ಇಡೀ ದೀಪಾವಳಿಯನ್ನು ನಾವು ಅವರ ಮನೆಯಲ್ಲಿ ಆ ಮನೆತನದ ಮಕ್ಕಳಾಗಿಯೇ ಒಂದುವಾರ ಸಂತೋಷದಿಂದ ಕಳೆದೆವು.

ಅವರು ಮೊದಲಿನಿಂದಲೂ ತಮ್ಮ ಸಂಪರ್ಕಬಂದವರೊಡನೆ ಅತ್ಯಂತ ಸ್ನೇಹ ಸೌಹಾರ್ದದಿಂದ ನಡೆದುಕೊಳ್ಳುವ ಆತ್ಮೀಯತೆಯು ಅವರ ಹುಟ್ಟುಗುಣ. ಅದರಂತೆ ಅವರು ಅತ್ಯಂತ ಮೃದು ಮತ್ತು ಕೋಮಲ ಹೃದಯಿಗಳು. ಅವರ ಬಾಯಿಯಲ್ಲಿ ಕಠಿಣವಾದ ಶಬ್ದ ಬಂದದ್ದನ್ನು ನಾವು ಕಂಡೇ ಇಲ್ಲ. ಶಾಲೆಯ ಎಲ್ಲಾ ಮಕ್ಕಳನ್ನು ತಮ್ಮ ಸ್ವಂತ ಮಕ್ಕಳಂತೆಯೇ ಅತ್ಯಂತ ಪ್ರೀತಿಯಿಂದ ನಡೆಸಿಕೊಳ್ಳುತ್ತಿದ್ದರು, ಹೀಗಾಗಿ, ಈ ಪ್ರೀತಿಯ ಮೂಲಕವೇ ಅವರ ಪ್ರಭಾವ ನಮ್ಮಲ್ಲಿ ಮೇಲೆ ಅತಿಶಯವಾಗಿತ್ತು. ಮನದಲ್ಲಿ ಅಚ್ಚಳಿಯದೇ ಇಂದಿಗೂ ಉಳಿದಿದೆ. ಇಂತಹ ಮಾಸ್ತರುಗಳು ವಿದ್ಯಾರ್ಥಿಗಳಿಗೆ ದೊರಕುವುದು ಬಹಳ ಅಪರೂಪ. ನಮಗೆ ಅವರು ದೊರಕಿದ್ದು ನಮ್ಮ ಸೌಭಾಗ್ಯದ ಯೋಗಾಯೋಗ.

ಬೆಟಗೇರಿಯವರು ಹುಟ್ಟುಕವಿಗಳು. ಕನ್ನಡ ಭಾಷೆಯಲ್ಲಿ ಅತ್ಯುನ್ನತ ಪಾಂಡಿತ್ಯ ಹೊಂದಿದ ಮೇಧಾವಿಗಳು. ತಾವು ಸ್ವತಃ ಕವಿಗಳಾದದ್ದಲ್ಲದೇ ಶಾಲಾ ಮಕ್ಕಳಲ್ಲಿ ಹುದುಗಿದ್ದ ಕವಿತಾಶಕ್ತಿಯನ್ನು ಪ್ರಜ್ವಲಿಸಿ, ಅವರನ್ನು ಕವಿಗಳನ್ನಾಗಿ ಮಾಡುವ ಕೌಶಲ್ಯವನ್ನು ಹೊಂದಿದ್ದರು. ಅವರಿದ್ದಲ್ಲೆಲ್ಲಾ ಕವಿತಾಸ್ಫೂರ್ತಿ ವ್ಯಾಪಿಸಿರುತ್ತಿತ್ತು. ಹೀಗಾಗಿ ಆ ಶಾಲೆಯಲ್ಲಿ ಎಲ್ಲಾ ಮಕ್ಕಳು ಕವಿತೆಯನ್ನು ಕಟ್ಟಹತ್ತಿದರು. ಈ ಕವಿತ್ವ ಶಕ್ತಿಯನ್ನು ಪ್ರೋತ್ಸಾಹಗೊಳಿಸಲು, ವಾರಕ್ಕೊಂದು ಸಭೆಯನ್ನು ಕರೆದು ಅದರಲ್ಲಿ ವಿದ್ಯಾರ್ಥಿಗಳು ಒಂದೊಂದು ಹೊಸ ಕವಿತೆಯನ್ನು ತಾವೇ ರಚಿಸಿ ಓದುವ ಕಾರ್ಯಕ್ರಮ ಇಟ್ಟಿದ್ದರು. ಇದಲ್ಲದೇ ಅವರು ಯಾವಾಗಲೂ ಅತ್ಯಂತ ಪರಿಶುದ್ಧವಾದ ತಿಳಿಯಾದ ಕನ್ನಡ ಭಾಷೆಯನ್ನು ತಾವು ಬಳಸುತ್ತಿದ್ದರಲ್ಲದೇ ವಿದ್ಯಾರ್ಥಿಗಳು

ಸಹಾ ಆ ರೀತಿ ಬಳಸುವಂತೆ ಶಿಕ್ಷಣ ಕೊಟ್ಟರು. ಹೀಗಾಗಿ ಅವರ ಕೈಯಲ್ಲಿ ಕಲಿತ ವಿದ್ಯಾರ್ಥಿಗಳೆಲ್ಲರೂ ಶುದ್ಧವಾದ ಅಚ್ಚಗನ್ನಡದಲ್ಲಿ ಬರಿಯಲು ಸಮರ್ಥರಾದರು. ಸ್ವತಃ ತಾವು ಆಳವಾದ ಅಭ್ಯಾಸಿಗಳಲ್ಲದೇ ವಿದ್ಯಾರ್ಥಿಗಳು ಕೂಡ ಆಳವಾದ ಅಭ್ಯಾಸವನ್ನು ಮಾಡುವಂತೆ ಪ್ರೋತ್ಸಾಹಿಸುತ್ತಿದ್ದರು.

ನಮ್ಮ ಚಿಕ್ಕವಯುಸ್ಸಿನಲ್ಲಿಯೇ (ಅಂದರೆ ನಮಗಾಗ, ೧೩, ಅಥವಾ ೧೪ ವರುಷಗಳಿರಬಹುದು) ಚೊಕ್ಕವಾದ ಕನ್ನಡ ಭಾಷೆ ಕಲಿಯಲು ಅವಕಾಶ ಸಿಕ್ಕಿತು. ನಮ್ಮಿಂದ ಹಳಗನ್ನಡದಲ್ಲಿ ನಿಬಂಧಗಳನ್ನು ಬರೆಸುವಷ್ಟು ಶಿಕ್ಷಣವನ್ನು ಅವರು ನಮಗೆ ಕೊಟ್ಟರು. ಬೆಟಗೇರಿಯವರ ಅಗಾಧ ಪಾಂಡಿತ್ಯ ಯಾವ ಶಾಲಾ, ಕಾಲೇಜುಗಳಿಂದಲೂ ಪಡೆದುದಲ್ಲ. ಅದು ಸ್ವಯಾರ್ಜಿತ. ಹಳಗನ್ನಡ ಕಾವ್ಯಗಳಲ್ಲಿ ಅವರಿಗೆ ಅಗಾಧವಾದ ಪಾಂಡಿತ್ಯವಿತ್ತು. ಅವರಿಗೆ ಆಗಿನ ಕಾಲಕ್ಕೇ ಯಾವುದೇ ಯೂನಿವರ್ಸಿಟಿಯ ಡಿಗ್ರಿಗಳಿಲ್ಲದಿದ್ದರೂ B.A, M.A. ಡಿಗ್ರಿಗಳಿಗೆ ಓದುವ ಕನ್ನಡ ವಿದ್ಯಾರ್ಥಿಗಳು, ಅಧ್ಯಾಪಕರು, ಪ್ರಾಚಾರ್ಯರು ಬಂದು, ಅವರಲ್ಲಿ ಶಿಕ್ಷಣ ಪಡೆಯುತ್ತಿದ್ದರು. ನನಗೆ ನೆನಪಿದ್ದ ಮಟ್ಟಿಗೆ ಆಗಿನ ಕೊಲ್ಹಾಪುರ ಕಾಲೇಜಿನ ಪ್ರಾಧ್ಯಾಪಕರಾಗಿದ್ದ "ಕುಂದಣಗಾರ್" ಎಂಬುವವರು ಇವರಲ್ಲಿ ಪಾಠ ಹೇಳಿಸಿಕೊಳ್ಳಲು ಬರುತ್ತಿದ್ದರು.

ಬೆಟಗೇರಿಯವರು ಭಾಷೆಯ ಮೇಲಿನ, ನಾಡಿನ ಮೇಲಿನ. ಪ್ರೇಮದಿಂದ, ವಿದ್ಯಾದಾನ ಮಾಡಿದರೇ ಹೊರತು, ಅದನ್ನೊಂದು ವ್ಯಾಪಾರೀ ಮನೋಭಾವದಿಂದ, ಅಥವಾ ಧನಾರ್ಜನೆಯ ಉಪಾಯವಾಗಿ ಬಳಸಿದವರಲ್ಲ. ಹೆಚ್ಚಾಗಿ ಕವಿಗಳೆಂದೇ ನನಗವರ ಪರಿಚಯ. ನಾವು ಧಾರದಾಡದಲ್ಲಿದ್ದ ಕಾಲಕ್ಕೆ ನಾಡಹಬ್ಬದ ಕಾರ್ಯಕ್ರಮ ಗೆಳೆಯರ ಗುಂಪಿನಿಂದ ಪ್ರಾರಂಭವಾಯಿತು. ಬೆಟಗೇರಿಯವರು ಸಹಾ ಗೆಳೆಯರ ಗುಂಪಿನಲ್ಲಿ ಇದ್ದವರೇ. ಆಗಿನ ಕಾಲಕ್ಕೆ ಧಾರವಾಡದಲ್ಲಿ ಮರಾಠಿ ಭಾಷೆಯ ಪ್ರಾಬಲ್ಯ ಅತಿಶಯವಾಗಿತ್ತು. ಗಜಾನನ ಉತ್ಸವದಲ್ಲಿ ಪುಣೆಯಿಂದ ಬಂದ ಮರಾಠಿ ಹಾಡುಗಳ ಮೇಳಗಳು ಕಾರ್ಯಕ್ರಮ ನಡೆಸುತ್ತಿದ್ದವು. ಅಂತಹ ಮೇಳಗಳು ಕನ್ನಡ ಹಾಡುಗಳನ್ನು ಬಳಸಲು, ಸರಿಯಾದ ಹಾಡುಗಳು ಆಗಿನ ಕಾಲಕ್ಕೆ ಇದ್ದಿಲ್ಲ. ಅಂತಹ ಒಂದು ಕೊರತೆಯನ್ನು ಬೆಟಗೇರಿಯವರು ನಿವಾರಿಸಿ, ಆ ಮೇಳಗಳಿಗೆ ಅನುಕೂಲವಾಗುವಂತಹ ಕವಿತೆಗಳನ್ನು ಸುಂದರವಾಗಿ ರಚಿಸಿ ಮೇಳಗಳಿಗೆ ಒದಗಿಸಿ ಕೊಟ್ಟರು. ಅಂತಹ ಹಾಡುಗಳಲ್ಲಿ "ಗಣನಾಥ ಗೌರೀಜಾತ ಜಯ ಭಗವಂತ" ಮತ್ತು "ಎನಿತು ಇನಿದು ಈ ಕನ್ನಡ ನುಡಿಯು" ಮುಂತಾದ ಹಾಡುಗಳು ಅತ್ಯಂತ ಜನಪ್ರಿಯತೆಯನ್ನು ಗಳಿಸಿದವು. ಇದಲ್ಲದೇ ನಾವು ಆ ಶಾಲೆಯಲ್ಲಿ ನಿತ್ಯ ಪ್ರಾರ್ಥನೆಗೆ ಉಪಯೋಗಿಸುತ್ತಿದ್ದ "ರಕ್ಷಿಸು ಕರ್ನಾಟಕ ದೇವಿ" ಕೂಡ ಅವರದೇ ಇರಬೇಕೆಂದು ನನ್ನ ನೆನಪು, ಈಗೊಂದು ಹದಿನೈದು ದಿನಗಳ ಹಿಂದೆ ಆ ಹಾಡನ್ನು ರೇಡಿಯೋದಲ್ಲಿ ಕೇಳಿ ನನಗೆ ಅತ್ಯಂತ ಆನಂದವಾಯಿತು.

ರಾಷ್ಟ್ರೀಯ ಶಾಲೆಯಿಂದ "ಸ್ವಧರ್ಮ" ಎಂಬ ಮಾಸಪತ್ರಿಕೆಯನ್ನು ಕೂಡ ಹೊರಡಿಸಲಾಗುತ್ತಿತ್ತು. ಅದರಲ್ಲಿ ಪ್ರತಿ ತಿಂಗಳು ತಪ್ಪದೇ ಹೊಸ ಹಾಡುಗಳು ಇರುತ್ತಿದ್ದವು. ನಾವು ರಾಷ್ಟ್ರೀಯ ಶಾಲೆಯಲ್ಲಿದ್ದ ಕಾಲದಲ್ಲೇ ಶ್ರೀ ಬೆಟಗೇರಿಯವರು "ಮುದ್ದನ ಮಾತುಗಳು" ಎಂಬ ಕವಿತಾಗುಚ್ಛವನ್ನು ರಚಿಸಿದರು. ಅದಕ್ಕೆ ಮುಂದೆ "ದೇವರಾಜ ಬಹಾದ್ದೂರ್" ನಿಧಿಯ ಪುರಸ್ಕಾರ ದೊರೆಯಿತು. ಈ "ಮುದ್ದನ ಮಾತುಗಳು" ಎಲ್ಲಾ ವಿಧದಲ್ಲಿಯೂ ಮಹಾಕವಿ ರವೀಂದ್ರನಾಥ ಟಾಗೂರ್‌ರವರ "ಕ್ರೀಸೆಂಟ್ ಮೂನ್" ಎಂಬ ಕವಿತಾಗುಚ್ಛಕ್ಕೆ ಸರಿಸಮಾನವಾದ ಸ್ವತಂತ್ರ ಗ್ರಂಥ. ಪ್ರತಿನಿತ್ಯ ಒಂದೊಂದು ಹೊಸ ಹಾಡುಗಳನ್ನು ಅವರು ರಚಿಸುತ್ತಿದ್ದ ಕಾಲದಲ್ಲಿ, ಅದನ್ನು ನೋಡುವ ಮತ್ತು ರಚಿಸಿದ ಕೂಡಲೇ ಅವರ ಬಾಯಿಂದ, ಅದನ್ನು ಕೇಳುವ ಮಹಾಭಾಗ್ಯ ನಮ್ಮದಾಗಿತ್ತು. ಅದರಲ್ಲಿಯ ಹಾಡುಗಳು ಎಳೆಯ ಮಕ್ಕಳಾದ ನಮ್ಮ ಮನಸನ್ನು ಮುಗ್ಧಗೊಳಿಸುತ್ತಿತ್ತು. ದಿನನಿತ್ಯವೂ ಈ ಹಾಡುಗಳನ್ನು ಕೇಳಿ, ಅಂತಹುಗಳನ್ನೇ ರಚಿಸುವ ಸ್ಫೂರ್ತಿ ನನ್ನ ಸ್ನೇಹಿತನಿಗೆ ಬಂದಿತು. ಮತ್ತು ಅವರ ಕವಿತೆಗಳನ್ನೇ ಹೋಲುವಂತಹ ಒಂದು ಹೊಸ ಹಾಡನ್ನು ಕೂಡ ಮಾಡಿದ. ಆಗ ಶ್ರೀ ಬೆಟಗೇರಿ ಮಾಸ್ತರ್ ಅವರ ಕೂಡ ನಾನು ನನ್ನ ಸ್ನೇಹಿತ ಒಂದು ವಿನೋದ ಪ್ರಸಂಗ

ವನ್ನು ಸಿದ್ದು ನಡೆನನಗೆ ನೆನಪಾಗುತ್ತಿದೆ. ಆ ಹಾಡನ್ನು ನನ್ನ ಸ್ನೇಹಿತನಿಂದ ರಚನೆಯಾದ ಕೂಡಲೇ ನಾವಿಬ್ಬರೂ ಮಾತನಾಡಿಕೊಂಡು ಪೋಷ್ಟಿನ ಮೂಲಕ ಆ ಕವಿತೆಯನ್ನು ಮಾಸ್ತರಿಗೆ ಕಳಿಸಿದೆವು. ಅದರಲ್ಲಿ ಅದರ ಕರ್ತ ಒಬ್ಬ ಮೈಸೂರಿನ ಕಡೆಯ H.ರಾಮರಾವ್ B. A. ಎಂದೂ ನಮೂದಿಸಿ ಅವರಿಂದಲೇ ಬರೆದಂತಹ, ಒಂದು ಪತ್ರ ವನ್ನು ಕೂಡ ಅದರ ಜೊತೆಗಿಟ್ಟು ಆ ಪತ್ರದಲ್ಲಿ ಅಂತಹ ಅನೇಕ ಹಾಡುಗಳನ್ನು ಈಗಾಗಲೇ ರಚಿಸಿದ್ದು ಆ ಸಂಗ್ರಹ ಈಗಾಗಲೇ ಅಚ್ಚಿನಲ್ಲಿದೆ ಎಂದು ಬರೆಯಲಾಗಿತ್ತು.

ಈ ಪತ್ರದ ಪರಿಣಾಮ ಶ್ರೀ ಬೆಟಗೇರಿಯವರ ಮೇಲೆ ಏನಾಗುತ್ತದೋ ಎಂದು ನೋಡುವ ತುಂಟತನದ ಕುತೂಹಲ ನಮ್ಮಿಬ್ಬರಿಗಿತ್ತು. ಆ ಪತ್ರವನ್ನು ಅವರು ಒಡೆದು ನೋಡುವಾಗ್ಗೆ ನಾವು ದೂರದಿಂದ ನಿಂತು,ಅವರ ಮೇಲಾಗುವ ಪರಿಣಾಮವನ್ನು ನೋಡುತ್ತಲಿದ್ದೆವು. ಅದು ಅವರ ಮೇಲೆ ಮೊದಲಿಗೆ ಸ್ವಲ್ಪ ಕೆಟ್ಟ ಪರಿಣಾಮ ವನ್ನು ಮಾಡಿದರೂ, ಅವರು ಕೂಡಲೇ ಆ ಕವಿತೆಯನ್ನು ಓದಿ ಅದರಲ್ಲಿ ತಮ್ಮ ಭಾಷೆಯ ಛಾಯೆ ಎದ್ದು ಕಾಣು ತ್ತಿದ್ದದನ್ನು ನೋಡಿ ಅದರ ಕರ್ತೃಗಳು ತಮ್ಮ ಶಿಷ್ಯರೇ ಇರಬೇಕೆಂದು ಪರಿಗ್ರಹಿಸಿ. ಒಂದು ರೀತಿಯ ಸಮಾಧಾನ ಮತ್ತು ಆನಂದ ಭಾವವನ್ನು ತಾಳಿದರು. ಕೂಡಲೇ ನಮ್ಮ ಸ್ನೇಹಿತನಿಗೆ ಹೇಳಿ ಕಳಿಸಿದರು. ನಾವಿಬ್ಬರೂ ಅವರೆದುರಿಗೆ ಹೋದ ಕೂಡಲೇ ಕವಿತಾ ಬಹಳ ಚೆನ್ನಾಗಿ ರುವುದೆಂದು, ಶಹಭಾಸ್‌ಗಿರಿಯನ್ನು ನನ್ನ ಸ್ನೇಹಿತನಿಗೆ ಕೊಟ್ಟರು. ಕೂಡಲೇ ನಾವಿಬ್ಬರೂ ಗೆಳೆಯರೂ ಮಾಸ್ತ ರರೂ, ನಕ್ಕು ನಲಿದಾಡಿದೆವು.

ಕೊನೆಯಂದಾಗಿ ನಮ್ಮ ಮಾಸ್ತರರು ಕರ್ನಾಟಕ ದಲ್ಲಿಯ ಪ್ರಾಚೀನ ಕಾಲದ ಮತ್ತು ನವೀನ ಕಾಲದ ಎಲ್ಲಾ ಕವಿಗಳಿಂದ ರಚನೆಯಾದ ಭಗವಂತನ ಮೇಲಿನ ಹಾಡು ಗಳನ್ನು ಸಂಗ್ರಹಿಸಿ ಪರಿಷ್ಕರಿಸಿ ಕರ್ನಾಟಕ ಶಿಕ್ಷಣ ಸಮಿ ತಿಯ ಪ್ರಕಟನೆಗಳಲ್ಲಿ ಭಾವಗೀತೆಗಳೆಂಬ ಹೆಸರಿನಲ್ಲಿ ಪ್ರಕಟಗೊಳಿಸಿದರು. ಇದು ಬಹಳ ಮಾಡಿ ಅನೇಕರಿಗೆ ಗೊತ್ತಿರಲಿಕ್ಕೆ ಇಲ್ಲ. ಅದೊಂದು ಉತ್ತಮ ಭಕ್ತಿಗೀತೆ ಗಳ ಗ್ರಂಥ. ಅದರಲ್ಲಿ ಎಲ್ಲಾ ಮತ, ಪಂಥಗಳ ದಾಸರ ಶರಣರ ಮತ್ತು ಕರ್ನಾಟಕದ ಇತರ ಸಾಧು-ಸಂತರ, ಭಾವಪೂರ್ಣ ಭಕ್ತಿಯ ಹಾಡುಗಳಿರುವುದಲ್ಲದೇ ಇಪ್ಪತ್ತ ನೆಯ ಶತಮಾನದ ಅನೇಕ ಆಧುನಿಕ ಕವಿಗಳ ಭಕ್ತಿಗೀತೆ ಗಳು ಸಹ ಅದರಲ್ಲಿ, ಸೇರಿವೆ. ಅದರಲ್ಲಿ ಸ್ವತಃ ಬೆಟಗೇರಿ ಶರ್ಮ ಅವರ ಭಕ್ತಿಭಾವದ ಹಾಡುಗಳು ಇವೆ. "ಕೊಳಲ ನುಡಿಯೋ ಕೃಷ್ಣ" ಎಂಬುದಂತೂ, ಅತ್ಯಂತ ರಸವತ್ತಾದ ಭಾವಪರಿಪೂರ್ಣವಾದ ಹಾಡು. ಇಂತಹ ಮಹೋನ್ನತ ಜೀವಿಯ ಕೈಯಲ್ಲಿ ಕಲಿತದ್ದು ನಮ ಗೆಲ್ಲಾ ಧನ್ಯತೆಯನ್ನು ತಂದುಕೊಟ್ಟಿದೆ. ಆ ಧನ್ಯತೆಯ ಕೃತಾರ್ಥ ಭಾವದಿಂದ ವಂದನಾರೂಪವಾಗಿ ಈ ನಾಲ್ಕು ನುಡಿಗಳನ್ನು ನನ್ನ ನೆಚ್ಚಿನ ಮೆಚ್ಚಿನ, ಮಾಸ್ತರರ ಅಡಿ ದಾವರೆಗಳಿಗೆ ಅರ್ಪಿಸುವೆ. ● ●

# ತಾಲೂಕಾ ಅಭಿವೃದ್ಧಿ ಮಂಡಳ ಹುಕ್ಕೇರಿ
## "ಪ್ರಗತಿ ಪಕಿನೋಟ"

### ಸನ್ 1980–81 ರಲ್ಲಿ ಕೈಕೊಂಡ ಅಭಿವೃದ್ಧಿ ಕಾರ್ಯಗಳು.

| | ಎಸ್.ಸಿ. | ಎಸ್.ಟಿ. | ಡಿ.ಟಿ. | ಎನ್.ಟಿ. | ಇತರರು | ಒಟ್ಟು |
|---|---|---|---|---|---|---|
| 1) ಜನತಾ ನಿವೇಶನಗಳನ್ನು ಹಂಚಿದ್ದು | 581 | 28 | 65 | 170 | 1316 | 2160 |

| | ಹರಿಜನರಿಗೆ. | ಇತರರಿಗೆ. | ವಿನಿಯೋಗ ಮಾಡಿದ ಹಣ. |
|---|---|---|---|
| 2) ಜನತಾ ಮನೆಗಳನ್ನು ಹುಡ್ಕೊ ಸಹಾಯದಿಂದ ಕಟ್ಟಿಸಿದ್ದು. ( ಸನ್ 1978-79 ರಿಂದ 1980–81 ರ ವರೆಗೆ ) | 271 | 671 | 18,93,514-00 |
| 3) ಪ್ರಾಯೋಗಿಕ ಮನೆಗಳನ್ನು ಕಟ್ಟಿಸಿದ್ದು (ಸನ್ 1979-80 ಮತ್ತು 1980-81) | 90 | 50 | 2,01,172-00 |

| | ತಗೆದುಕೊಂಡ ಕೋಣೆಗಳು. | ಮುಗಿದ ಕೋಣೆಗಳು. | |
|---|---|---|---|
| 4) ಉದ್ಯೋಗ ದೃಢೀಕರಣ ಯೋಜನೆಯಲ್ಲಿ ಶಾಲಾ ಕೋಣೆಗಳನ್ನು ಕಟ್ಟಿಸಿದ್ದು, ಒಟ್ಟು ಕಟ್ಟಿಸಿದ ಕೋಣೆಗಳ ಸಂಖ್ಯೆ | 38 | 10 | 1,36,514-00 |
| 5) ಶಾಲಾ ಕೋಣೆಗಳ ದುರಸ್ತಿ ಸಂಖ್ಯೆ | 35 | | 22,000-00 |
| 6) ಕುಡಿಯುವ ನೀರಿನ ಭಾವಿಗಳನ್ನು ಕಟ್ಟಿಸಿದ್ದು. | 2 | | 8,000-00 |
| 7) ಗ್ರಾಮೀಣ ರಸ್ತೆ ರಚಿಸಿದ್ದು ಹಾಗು ದುರಸ್ತಿ ( ಟಿ. ಡಿ. ಬಿ ಯಿಂದ) | 10 | | 45,888-00 |
| 8) ಉದ್ಯೋಗ ದೃಢೀಕರಣ ಯೋಜನೆಯಲ್ಲಿ ಗ್ರಾಮೀಣ ಹರಿಜನಕೇರಿ ಹಾಗು ಜನತಾ ಕಾಲನಿ ರಸ್ತೆ ರಚಿಸಿದ್ದು | 11 | | 21,511-00 |
| 9) ಪ್ರವಾಸಿ ತಂಗು ಮನೆ ಕಟ್ಟಿಸಿದ್ದು | 1 | | 5,000-00 |
| 10) ಪ್ರೌಢ ಶಿಕ್ಷಣ ವರ್ಗಗಳನ್ನು ನಡಿಸಿದ್ದು ಸಂಖ್ಯೆ | 10 ಪುರುಷರ. | 2ಮಹಿಳೆಯರ | 3,500-00 |
| 11 ಬಾಲವಾಡಿಗಳಿಗೆ ಸಹಾಯಧನ ಕೊಟ್ಟದ್ದು | | | 6,000-00 |
| 12) ಒಕ್ಕಲುತನ ಅಭಿವೃದ್ಧಿ ಸಲುವಾಗಿ, | | | 10,000-00 |
| 13) ಹರಿಜನ ಗಿರಿಜನ ಜನಾಂಗದವರಿಗೆ ಅಭಿವೃದ್ಧಿ ಯೋಜನೆಗಳ ಸಲುವಾಗಿ ಶೇ 18 ಕಾಯ್ದಿರಿಸಿದ ಹಣ ಖರ್ಚು ಮಾಡಿದ್ದು | | | |
| 1) ಹರಿಜನ ಮಕ್ಕಳಿಗೆ ಹಾಸ್ಟೇಲ ಕಟ್ಟಿಸಿದ್ದು | 1 | | 35,000-00 |
| 2) ಹರಿಜನರಿಗೆ ಸಮಾಜ ಮಂದಿರ ಕಟ್ಟಿಸಿದ್ದು. | 1 | | 10,000-00 |
| 3) ಸಾಮೂಹಿಕ ನೀರಾವರಿಗಾಗಿ. | 1 | | 3,000 00 |
| 14) ಸಾರ್ವಜನಿಕ ಆರೋಗ್ಯ ಅ) ತಾಲೂಕಾ ಅಭಿವೃದ್ಧಿ ಮಂಡಳದಿಂದ ನಡೆಸುತ್ತಿರುವ ದವಾಖಾನೆಗಳು. (1) ಹುಕ್ಕೇರಿ. (2) ಪಾಶ್ಚಾಪೂರ | | | 76,312-23 |
| ಬ) ಕುಟುಂಬ ಕಲ್ಯಾಣಕ್ಕಾಗಿ. | | | 2,000-00 |
| 15) ದನಗಳ ದವಾಖಾನೆಗಾಗಿ. | | | 11,086-80 |

| | ಫಲಾನುಭವಿಗಳ ಸಂಖ್ಯೆ | ಸಹಾಯಧನ | ಸಾಲದ ಹಣ |
|---|---|---|---|
| 16) ಸಂಯುಕ್ತ ಗ್ರಾಮೀಣ ಅಭಿವೃದಿ ಅಂಗವಾಗಿ, ಚಿಕ್ಕ ಅತೀಚಿಕ್ಕ ಕೃಷಿ ಕಾರ್ಮಿಕರಿಗೆ ಕರಕುಶಲ ಕಾರ್ಮಿಕರಿಗೆ ಬ್ಯಾಂಕಿನಿಂದ ಸಾಲ ದೊರೆತಿದ್ದು | 345 | 4,00,579–00 | 15,31,592–00 |

ಎ. ಬಿ. ದೇಸಾಯಿ
ಅಧ್ಯಕ್ಷರು

ಎಂ. ಬಿ. ರೊಡಗಿ
ಮುಖ್ಯ ಕಾರ್ಯನಿರ್ವಾಹಕ

ಲೇ : ಗೋವಿಂದಮೂರ್ತಿ
ದೇಸಾಯಿ

# ಕಥೆಗಾರ ಬೆಟಗೇರಿ ಕೃಷ್ಣಶರ್ಮರು

ಈ ಶತಮಾನದ ಮೊದಲಿನ ಕೆಲ ದಶಕಗಳಲ್ಲಿ ನವೋದಯ ಸಾಹಿತ್ಯವು ಮೂಡ-ತ್ತಿರುವಾಗ, ಕವಿ, ಕಥೆಗಾರ, ಕಾದಂಬರಿಕಾರ, ವಿಮರ್ಶಕ, ಪತ್ರಿಕೋದ್ಯಮಿ, ಸಂಶೋಧಕ, ದಾಸಸಾಹಿತ್ಯಾರಾಧಕರಾಗಿ ಬೆಟಗೇರಿ ಕೃಷ್ಣಶರ್ಮರು ಸಾಹಿತ್ಯಕ್ಕೆ ಅನಪೇಕ್ಷಿತಭಾವನೆಯಿಂದ ಸಲ್ಲಿಸಿದ ಸೇವೆ ಅತ್ಯಮೂಲ್ಯವಾದದ್ದು. ಉತ್ತರಕರ್ನಾಟಕದ ಸಂಸ್ಕೃತಿಯ ಸತ್ವ: ಗ್ರಾಮೀಣ ಜನಜೀವನದ ರೀತಿ-ನೀತಿ, ನಮ್ಮ ಸುತ್ತುಮುತ್ತಲಿನ ಮಣ್ಣಿನ ಬದುಕನ್ನು ತಮ್ಮ ಕಥೆ-ಕಾವ್ಯಗಳಲ್ಲಿ ತುಂಬಿ ಕನ್ನಡ ಸಾಹಿತ್ಯವನ್ನು ಶ್ರೀಮಂತವನ್ನಾಗಿ ಮಾಡಿದವರಲ್ಲಿ ಶ್ರೀ ಬೆಟಗೇರಿಯವರು ಅಗ್ರಗಣ್ಯರೆಂದು ಅವರ ಕೃತಿಗಳ ಮೌಲ್ಯಮಾಪನವೇ ಸಾರುತ್ತಿದೆ.

ಶ್ರೀ ಬೆಟಗೇರಿಯವರು ಒಬ್ಬ ಶ್ರೇಷ್ಠ ಕಥೆಗಾರರನ್ನು ನಿರ್ಮಿಸುವಲ್ಲಿ ಸಾಕಷ್ಟು ಶ್ರಮಿಸಿದ್ದಾರೆ. ೧೯೩೮ ನೆಯ ಮೇ ತಿಂಗಳಲ್ಲಿ ಪ್ರಾರಂಭವಾದ ಬೆಟಗೇರಿಯವರ 'ಜಯಂತಿ' ಮಾಸಪತ್ರಿಕೆ ಅಖಂಡ ಎರಡು ದಶಕಗಳ ಕಾಲ ನಾಡಿಗೆ ಹೊಸಹೊಸ ಕಥೆಗಳನ್ನು ಕೊಡುತ್ತಿತ್ತು. 'ಜಯಂತಿ'ಯ ಮೂಲಕ ಬೆಟಗೇರಿಯವರು ಕಥಾ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆ ಸಾಹಿತ್ಯ ಇತಿಹಾಸದಲ್ಲಿ ಅವಿಸ್ಮರಣೀಯವಾದದ್ದು. ಕೈಗೆ ಬಂದ ಕಥೆಗಳನ್ನೆಲ್ಲಾ ಇದ್ದಕ್ಕಿದ್ದಂತೆ ಹಾಕುವ ಸಂಪಾದಕರು ಬೆಟಗೇರಿಯವರು ಆಗಿರಲಿಲ್ಲ, ಅವರ ಕಣ್ಣುಗಳ ಮುಂದೆ ಹಾದು, ಕೈಯಿಂದ ಅಲ್ಲಲ್ಲಿ ಮಾರ್ಪಾಡಾಗಿ, ಕಥೆ ಜಯಂತಿಯಲ್ಲಿ ಪ್ರಕಟವಾದರೆ ಆ ಲೇಖಕನು ಹೆಮ್ಮೆಪಡುವ ಲೇಖಕನಾಗುತ್ತಿದ್ದನು. ಅಷ್ಟು ತೂಕದ ಪತ್ರಿಕೆಯಾಗಿತ್ತು ಜಯಂತಿ! ಅಷ್ಟು ಶ್ರೇಷ್ಠದರ್ಜೆಯ ಸಂಪಾದಕರಾಗಿದ್ದರು ಬೆಟಗೇರಿಯವರು!! ದೈವ ಅವರ ರಕ್ಷಣೆಗೆ ನಿಂತು, ಅವರಿಗೆ ಮನಸ್ವಾಸ್ಥ್ಯ, ಆರ್ಥಿಕ ಬೆಂಬಲವನ್ನಿತ್ತಿದ್ದರೆ 'ಜಯಂತಿ' ಬೇರೊಬ್ಬರ ಕೈಗೆ ಸಿಕ್ಕು ಅನಾಥಳಾಗಿ ಅವರ ಕಣ್ಣಮುಂದೆ ಕೊನೆಯುಸಿರನ್ನೆಳೆಯುವ ದುರ್ಗತಿ ಬರುತ್ತಿರಲಿಲ್ಲ! ಜಯಂತಿ ನಿಂತುದಕ್ಕೆ ಬೆಟಗೇರಿಯವರಿಗೆ ಲಾಭವೆ ಆಗಿದೆ. ಕಾರಣ ಅವರ ಕಿಸೆಯಲ್ಲಿ ಇರುತ್ತಿದ್ದ ಪುಡಿಗಾಸು ಅದರಿಂದ ಉಳಿಯುವ ಯೋಗ ಬಂದಿತು, ಆದರೆ ಕನ್ನಡ ಕಥಾ ಪ್ರಪಂಚಕ್ಕೆ ಅಪಾರ ಹಾನಿಯಾಯಿತು,

ಸವೆದು, ಸವೆದು, ಸವಕಳಿ ನಾಣ್ಯವಾಗುತ್ತ ನಡೆದ ಈ ಶತಮಾನದ ಸುಸಂಸ್ಕಾರಗಳು ಚಲಾವಣೆಯಿಂದ ಆಚೆಗೆ ಹೋಗದಂತೆ, ತಮ್ಮ ಸಾಹಿತ್ಯದಲ್ಲಿ ಸೆರೆ ಹಿಡಿದು ಕನ್ನಡ ಸಾರಸ್ವತ ಪ್ರಪಂಚಕ್ಕೆ ಬೆಟಗೇರಿಯವರು ಮಹೋಪಕಾರವನ್ನು ಮಾಡಿದ್ದಾರೆ. ಉತ್ತರ ಕರ್ನಾಟಕದ ಜನಪದ ಜೀವನದ ಹಿನ್ನೆಲೆಯಲ್ಲಿ ಸತ್ವಯುತವಾದ ಕೃತಿಗಳನ್ನು ನಿರ್ಮಿಸಿದವರಲ್ಲಿ ಬೆಟಗೇರಿಯವರು ಅತ್ಯಂತ ಸಫಲರಾಗಿದ್ದಾರೆ. ಅನೇಕರು ಬೆಟಗೇರಿಯವರಿಗೆ ಆಂಗ್ಲ ಭಾಷೆ ಬರುವದಿಲ್ಲವೆಂದು ಬೆರಳು ಚುಚ್ಚಿ ಮಾತನಾಡುತ್ತಿದ್ದರು. ಅದು ಅವರಲ್ಲಿದ್ದ ಒಂದು ಕೊರತೆಯೆಂದು ಕೆಲವರು ಆಡಿಕೊಳ್ಳುತ್ತಿದ್ದರು. ಆದರೆ ನನ್ನಮಟ್ಟಿಗೆ ಅದು ದೇವರು ಅವರಿಗಿತ್ತ ಒಂದು ವರ! ಇಲ್ಲದೇ ಹೋಗಿದ್ದರೆ, ಅವರ ಕಥೆಗಳಲ್ಲಿರುತ್ತಿದ್ದ ಪ್ರಾಮಾಣಿಕ ಪ್ರಾದೇಶಿಕತೆಯ ಛಾಯೆ ಪರಿಶುದ್ಧ ಸಂಸ್ಕೃತಿಯ ತಿರುಳು ಇರದೇ ಹೋಗುತ್ತಿತ್ತೇನೋ! ಸಾಹಿತ್ಯ ಸೌಂದರ್ಯದಲ್ಲಿ ಭಾವನೆ ಅತ್ಯಂತ ಮಹತ್ವದ ಪಾತ್ರವನ್ನಾಡುತ್ತಿದ್ದ ನವೋದಯ ಸಾಹಿತ್ಯ ನಿರ್ಮಾಣದ ಯೌವನಾವಸ್ಥೆಯಲ್ಲಿ ಬೆಟಗೇರಿಯವರು ಭಾವನಾಪರವಶತೆಯಿಂದ ತೀರ ದೂರದಲ್ಲಿ ನಿಂತು.

ವಾಸ್ತವತೆಯು ಬೇರಿಗಂಟಿಕೊಂಡು, ತಾವು ನಿಂತ-ನೆಲದ, ಕುಡಿದ ನೀರಿನ, ಉಸಿರಾಡಿಸಿದ ಗಾಳಿಯ, ಮೆಲುಕು ಹಾಕಿದ ಅನುಭವಗಳ ಸತ್ವಸಾರವನ್ನು ಕಥೆಗಳಲ್ಲಿ ತುಂಬಿ ಕಥೆಗಳಿಗೆ ಜೀವಂತಿಕೆಯನ್ನು ತಂದುಕೊಟ್ಟರು.

ಬೆಟಗೇರಿಯವರು ದಾರಿದ್ರ್ಯದ ದಟ್ಟಚಿತ್ರ, ಕೆಳ ಮಧ್ಯಮ ವರ್ಗದ ಜೀವನದ ಇರುವಿಕೆ, ಇತಿಹಾಸ ಪ್ರಜ್ಞೆಯನ್ನು ತುಂಬಿ ಕಥೆಗಳನ್ನು ಬರೆದಿರುವದರಿಂದ ಅವರ ಕಥೆಗಳೆಲ್ಲಾ, ಒಂದೇ ಜಾಡಿನಲ್ಲಿ ಹೊರಟ ಕಥೆ ಗಳಂತೆ ಕಾಣುತ್ತವೆ, ಎಂದು ಇತ್ತೀಚಿನ ವಿಮರ್ಶಕರು ಅಪಶ್ರುತಿಯನ್ನು ಮಿಡಿಸ ಹತ್ತಿದ್ದಾರೆ. ಗ್ರಾಮ್ಯ ಜೀವ ನದ ಬಗ್ಗೆ ಬೆಟಗೇರಿಯವರಿಗಿದ್ದ ಸಹಾನುಭೂತಿ, ಹಳ್ಳಿ ಗರ ನಿರ್ಮಲ ಪ್ರೇಮ, ಹಳ್ಳಿಗರ ವಾಸ್ತವಜೀವನದಲ್ಲಿ ಕಂಡುಬರುತ್ತಿದ್ದ ಆದರ್ಶಗಳನ್ನು ಎತ್ತಿಹಿಡಿಯುವ ಮನೋಭಾವ ಬೆಟಗೇರಿಯವರ ಕಥೆಗಳಲ್ಲಿ ಹೆಚ್ಚುಹೆಚ್ಚಾಗಿ ಕಂಡು ಬರುತ್ತಿರುವದರಿಂದ, ಇಂದಿನ ದಶಕಗಳ ವಿಮರ್ಶ ಕರಿಗೆ ಅವರ ಕಥೆಗಳು ನೀರಸವಾಗಿ ಕಾಣುತ್ತಿರಬಹುದು. ಆದರೆ ಬೆಟಗೇರಿಯವರು ಸಾಹಿತ್ಯವನ್ನು ನಿರ್ಮಿಸಿದ ಕಾಲ, ಪರಿಸರ, ಸಮಾಜದ ರೀತಿನೀತಿಗಳನ್ನು ಕಣ್ಣು ಮುಂದೆ ತಂದುಕೊಂಡರೆ ಬೆಟಗೇರಿಯವರು ಅಂದು ಹೊಸಹೊಸ ಪ್ರಯೋಗಗಳನ್ನು ಒಳ್ಳೆ ಯಶಸ್ಸಿರೀತಿಯಾಗಿ ಮಾಡಿದ್ದಾರೆಂದು ಹೇಳಬಹುದು. ಧಾರವಾಡದಲ್ಲಿ ಬಾನುಲಿ ಇರದಾಗ, ಬೆಟಗೇರಿಯವರು ಮುಂಬೈ ಬಾನುಲಿಯಿಂದ ಬಿತ್ತರಿಸುವಾಗ ಉತ್ತರ ಕರ್ನಾಟಕದ ಜನತೆ ಮೈಯು ನ್ನೆಲ್ಲಾ ಕಿವಿಯನ್ನಾಗಿ ಮಾಡಿಕೊಂಡು ಕೇಳುತ್ತಿದ್ದರು. ಬೆಟಗೇರಿಯವರು ತಮ್ಮ ಕಥೆಗಳಲ್ಲಿ ಬಳಸಿದ ಬಳಕೆಯ ಮಾತುಗಳು, ಹೊಸ ರೀತಿಯ ನಿರೂಪಣೆ ಖಂಡಿತ ವಾಗಿಯೂ ಅವರನ್ನು ಒಳ್ಳೇ ಪರಿಣಾಮಕಾರಿ ಕಥೆಗಾರ ರನ್ನಾಗಿ ಮಾಡಿವೆ.

'ಮಲ್ಲಮ್ಮನ ಮಹಾಭಾರತ' ಹಾಗು 'ಇಬ್ಬಣದ ದಿಬ್ಬಣ' ಕಥೆಗಳನ್ನು ಓದಿದರೆ, ಇಂದಿಗೂ ಅದರಲ್ಲಿರುವ ಹೊಸತನವನ್ನು ಕಾಣಬಹುದು. ಬೆಟಗೇರಿಯವರಿಗೆ ಹಳ್ಳಿಗರ ಸುಖ-ದುಃಖ, ರೀತಿ-ನೀತಿ, ಸಂಪ್ರದಾಯ-ನಂಬಿಕೆಗಳಲ್ಲಿ ಬೆರೆತು ಒಂದಾಗುವದೆಂದರೆ ಅವರು ತಮ್ಮನ್ನು ತಾವೇ ಮರೆತುಬಿಡುತ್ತಾರೆ. 'ಇಬ್ಬಣದ ದಿಬ್ಬಣ' ಕಾದಂಬರಿಯ ಹೂರಣವನ್ನು ಹೊತ್ತುಕೊಂಡು ಅದೊಂದು ಶ್ರೇಷ್ಠ ಕಥೆ. ಗೌಡರ ಮನೆತನಗಳಲ್ಲಿ ಸ್ವಾಭಾ ವಿಕವಾಗಿ ತಲೆಎತ್ತಿದ್ದ ದಾಯಾದಿ ಮತ್ಸರ ಆ ಎರಡೂ ಮನೆತನಗಳನ್ನು ಬಿಡಿಬಿಡಿಯಾಗಿ ಒಡೆತದಿದ್ದದ್ದವು. ಚಳಿ ಮಳಿ ನಿಸರ್ಗವನ್ನೇ ಬದಲಿಸುವಂತೆ, ಚೆಲುವಕ್ಕ ಹಾಗು ಸೋಮನಾಥರ ಮದುವೆಯಾದಾಗ ಆ ಎರಡೂ ಮನೆ ತನಗಳ ಬಿರುಕು ಮುಚ್ಚಿ ಮತ್ತೆ ಇಡಿಯಾದವು. ಆದರೆ ಈ ಹೊಸ ಸಂಬಂಧ ನೀರುಗುಳ್ಳಿಯಂತೆ ಕ್ಷಣಾರ್ಧದಲ್ಲಿ ಒಡೆದುಹೋಯಿತು ಕಾರಹುಣ್ಣಿಮೆಯಲ್ಲಿ ಕರಿಹರಿಯುವ ಸೋಲಿನಿಂದ ಎರಡೂ ಮನೆತನಗಳಲ್ಲಿದ್ದ ಹಳೆಯ ದ್ವೇಷ ಮತ್ತೆ ಭುಗಿಲ್ ಎಂದು ಆಕಾಶಕ್ಕೆ ನೆಗೆಯಿತು. ಚಲು ವಕ್ಕ ಹೆಣ್ಣಾಗಿ ಸೋಮನಾಥ ಯಾವ ಕ್ಷಣದಲ್ಲಿ ಬಂದು ತನ್ನನ್ನು ಕರೆದುಕೊಂಡು ಹೋಗುವನೋ ಎಂದು ಯೌವ ನದ ಕನಸುಗಳನ್ನು ಕಾಣುತ್ತಿರುವಾಗ, ಸೋಮನಾಥ ಬಲಿಯನ್ನು ತೆಗೆದುಕೊಂಡು ಈ ಕಥೆಯಲ್ಲಿ ಬರುವ ಕಾರುಹುಣ್ಣಿಮೆಯ ಕರಿಯ ಚಿತ್ರ, ಉತ್ತರಕರ್ನಾಟಕದ ಆಡುಭಾಷೆಯ ಸೌಂದರ್ಯ, ಶೃಂಗಾರದ ಸಂಕುಮಾರತೆ ಗಳನ್ನು ನೋಡಿದರೆ, ಪ್ರಾಯಶ : ಬೆಟಗೇರಿಯವರನ್ನು ಬಿಟ್ಟರೆ ಮತ್ತಾರೂ ಅಂದು ಇಂಥ ಸುಂದರಕಥೆಗಳನ್ನು ಬರೆದಿಲ್ಲವೆಂದು ಹೇಳಿದರೆ ತಪ್ಪಾಗಲಾರದು. ಆನಂದ ಕಂದರು ಅಲ್ಲಿ ಬಳಸಿದ ಭಾಷೆಯ ಪ್ರಭಾವ ಎಂದೆಂದಿಗೂ ಅಳಿಕಿಸಲು ಬಾರದಂತಹದು. ಈ ಚಿತ್ರವೇಧಕ ಕಥೆ ಹಳ್ಳಿಯ ದಾರುಣ ಸತ್ಯವನ್ನು ತೆರೆದಿಟ್ಟಿದೆ. ಹಾಗೆಯೇ ಅವರ 'ಜಾಡರ ಜಾಣಪ್ಪ' ಇನ್ನೊಂದು ಸುಂದರವಾದ ಕಥೆ. ಜಾಣಪ್ಪ ಅಧೋಗತಿಗಿಳಿಯಲು ಅವನ ವೈಯಕ್ತಿಕ ಪಾಪ, ಪರಿಸರದ ಪ್ರಭಾವದಿಂದ ನೇಕಾರಿಕೆಗೆ ಕಡಿಮೆಯಾ ಗುತ್ತ ನಡೆದ ಪ್ರೋತ್ಸಾಹಗಳೇ ಕಾರಣವೆಂದು ಬೆಟಗೇರಿ ಹೇಳುತ್ತಾರೆ, ಆ ಕಥೆಯಲ್ಲಿ ! ಕಾರಣ, ಸ್ವಾನುಭವದಿಂದ ಜೀವನದ ಸತ್ಯತೆಯನ್ನು ಕಂಡುಕೊಂಡ ಬೆಟಗೇರಿಯವರು ಅಲ್ಲಿ ಪ್ರಾಮಾಣಿಕವಾದ ಚಿತ್ರವನ್ನಿರಿಸಿದ್ದಾರೆ. ಈಗಿನವ ರಿಗೆ ಅದು ಬೆಟಗೇರಿಯವರ ಸೋಲಾಗಿ ಕಂಡರೂ, ಅಂದಿ ನವರಿಗೆ ಅದು ಅವರ ಗೆಲುವೇ ಆಗಿತ್ತು. ಅವರು ಬರೆದ ಕಥೆಗಳ ಹಿನ್ನೆಲೆಯನ್ನು ಅವರು ಸ್ವತಃ ಕಂಡು ಅನುಭವಿ ಸಿದ್ದಾರೆ. ತಮ್ಮ ಸ್ವಾನುಭವಕ್ಕೆ ಬಂದ ಮಾತುಗಳನ್ನೇ ಅವರು ಕಲಾತ್ಮಕವಾಗಿ ಬಳಸಿ ನಮಗೆಲ್ಲ ಸಾಹಿತ್ಯದ ರಸ ದೌತಣವನ್ನು ಕೊಟ್ಟಿದ್ದಾರೆ.

'ದೆವ್ವದ ಸಂಸಾರ', 'ಮಲ್ಲಮ್ಮನ ಮಹಾಭಾರತ' ಹುಳಹತ್ತಿದ ಹಳ್ಳಿ ಕಥೆಗಳು ಅವರ ಹಲವಾರು ಕಥೆಗಳಲ್ಲಿ ಥಾಳವಾಗಿ ಎದ್ದು ಕಾಣುವಂತಹ ಕಥೆಗಳು. ಕಥೆಗಾರರಿಗೆ ದೆವ್ವದ ಅಸ್ತಿತ್ವದಲ್ಲಿ ನಂಬಿಕೆ ಇದ್ದುದರಿಂದ ಒಳ್ಳೇ ತಂತ್ರವನ್ನು ಬಳಸಿ, ಗ್ರಾಮೀಣ ಪ್ರದೇಶದ ಶಿಕ್ಷಕರ ಸುಖ ದುಃಖಗಳನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಬೆಟಗೇರಿಯವರ ಕಥೆಗಳಲ್ಲಿ ಒಮ್ಮೊಮ್ಮೆ ವರ್ಣನೆ ಹೆಚ್ಚಾಗಿ ಕಥಾರಚನೆಗೆ ಆತಂಕ ಬರುತ್ತದೆಂದು ಕೆಲ ವಿಮರ್ಶಕರು ಹೇಳಿದ್ದಾರೆ. ಆದರೆ ಬೆಟಗೇರಿಯವರ ಕಥಾರಚನೆಯ ಕಾಲವನ್ನು ನೋಡಿದರೆ, ಅಂದು ಈ ರೀತಿಯ ಕಥಾರಚನೆಯನ್ನೇ ಜನರು ಮೆಚ್ಚುತ್ತಿದ್ದರು. ಅಲ್ಲದೆ, ಕಥನ ಕೌಶಲ್ಯ ಇನ್ನೂ ಅಷ್ಟು ನಿಪುಣತೆಯ ಮಟ್ಟವನ್ನು ತಲುಪದಾಗ ಅವರು ಹಲವಾರು ಹೊಸ ಹೊಸ ಪ್ರಯೋಗಗಳನ್ನು ಮಾಡಿ ಹಲವಾರು ಕಥೆಗಳನ್ನು ಬರೆದಿದ್ದರಿಂದ ವರ್ಣನೆ ಸ್ವಲ್ಪ ಹೆಚ್ಚು ಬಂದಿರುವದು ಸ್ವಾಭಾವಿಕ. ಆ ಶತಮಾನದ ಕಥೆಗಳೊಂದಿಗೆ ಒರೆಗಲ್ಲಿಗೆ ಹಚ್ಚಿದಾಗ ಈ ದೋಷ ಅಷ್ಟು ದೊಡ್ಡದಲ್ಲವೆಂದು ನನ್ನ ಮತ,

'ಮಾತನಾಡುವ ಕಲ್ಲು', 'ಜೋಗತಿ ಕಲ್ಲು', 'ಸೀಮೆಯ ಕಲ್ಲು', 'ವೀರಮಾನ್ಯ', ನೆತ್ತರ ಕೊಡುಗೆ' ಕಥೆಗಳು ಬೆಟಗೇರಿಯವರ ಹಲವಾರು ಐತಿಹಾಸಿಕ ಕಾಲದ ಜೀವನ ಚಿತ್ರವನ್ನು ಕೊಡುವ ಕಥೆಗಳಲ್ಲಿ ಜನರನ್ನು ಹೆಚ್ಚು ಮನರಂಜಿಸಿದ ಕಥೆಗಳು; ವರ್ತಮಾನ ಕಾಲಕ್ಕೆ ಇತಿಹಾಸದ ಸಜೀವ ಪರಿಚಯವನ್ನು ಮಾಡಿಕೊಟ್ಟು, ಪಾತ್ರಗಳು ಕಣ್ಣೆದುರು ಜೀವಂತ ನಿಲ್ಲುವಂತೆ ಕಥಾರಚನೆಯನ್ನು ಮಾಡಿದ್ದು ಬೆಟಗೇರಿಯವರು ಎಂತಹ ಶ್ರೇಷ್ಠ ಕಥೆಗಾರರೆಂಬುದು ಎಂತಹವರಿಗೂ ಮನವರಿಕೆ ಆಗುವದು.

ಬೆಟಗೇರಿಯವರ ಗರಡಿಯಲ್ಲಿ ತರಬೇತಿ ಪಡೆದ ಹಲವಾರು ಕಥೆಗಾರರು ನಾಡಿನ ಶ್ರೇಷ್ಠ ಕಥೆಗಾರರೆನಿಸಿಕೊಂಡಿದ್ದಾರೆ. ಅವರ ಕಥನ ಶೈಲಿಯಲ್ಲಿ ಹೊಸಮಾರ್ಗವಿದೆ, ಸತ್ವಕಾರಿ ಪ್ರಭಾವವಿದೆ, ಅತ್ಯಂತ ಆಕರ್ಷಣೆಯಿದೆ. ಆನಂದಕಂದರ ಹದವರಿತ ಸಾಹಿತ್ಯ ನಾಡಿಗೊಂದು ಮಾರ್ಗವನ್ನು ಹಾಕಿಕೊಟ್ಟಿದೆ. ಕಾದಂಬರಿಗಳನ್ನು ಅವರು ಬರೆದು ಸಫಲರಾಗಿದ್ದರೂ, ಅವರ ಕಥೆಗಳು ಅವರನ್ನು ಹೆಚ್ಚು ಗಟ್ಟಿಗರನ್ನಾಗಿ ನಿಲ್ಲುವಂತೆ ಮಾಡಿವೆ.



ಲೇ- ಡಾ॥ ಸಿ. ಪಿ. ಕೆ.

# ನಲ್ವಾಡುಗಳು

ಸಾಮಾನ್ಯ ಜನರ ಅಂತರಂಗವನ್ನು ಅವರಾಡುವ ಭಾಷೆ ನೈಜವಾಗಿ ಚಿತ್ರಿಸಬಲ್ಲುದು. ಕನ್ನಡದಲ್ಲಿ ಸಂಸ್ಕೃತ ಪ್ರಚುರವಾದ ಪ್ರೌಢಶೈಲಿಯ ಕಾವ್ಯಗಳ ಜೊತೆಯಲ್ಲೇ ಸಾಮಾನ್ಯರ ಸುಖ-ದುಃಖಗಳನ್ನು ಬಿಂಬಿಸುವ ಸರಳ ಜಾನಪದ ಗೀತೆಗಳೂ ಬೆಳೆದುಬಂದುವು. ಜಾನಪದ ಭಾಷೆಯಲ್ಲಿಯೂ ಸೌಂದರ್ಯವಿದೆ, ಸತ್ವವಿದೆ. ಆದುದ ರಿಂದ ನಮ್ಮ ಪ್ರಾಚೀನ ಕವಿಗಳು ಅದನ್ನು ದೇಸಿ ಎಂದು ಕರೆದು ತಮ್ಮ ಕಾವ್ಯದಲ್ಲಿ ಅದಕ್ಕೆ ಸ್ಥಾನ ಕಲ್ಪಿಸಿದರು. ಈ ಯುಗದಲ್ಲಿ ಗ್ರಾಮ್ಯಭಾಷೆಯನ್ನು ಭಾವಗೀತೆಗಳಿಗೆ ಅಳವಡಿಸಿಕೊಂಡು ಯಶಸ್ಸು ಪಡೆದವರು ಶ್ರೀ ದ. ರಾ. ಬೇಂದ್ರೆ. ಶ್ರೀ ಆನಂದಕಂದ (ಬೆಟಗೇರಿ ಕೃಷ್ಣಶರ್ಮ) ರದೂ ಅದೇ ಮಾರ್ಗ.

'ಕಾಮನ ತಾಯಿಗೆ ಕಾಮನ ತಂದಿಗೆ
ಮೊದಲು ನಮ್ಮ ನಮನಾ'

ಎಂದು ನಾಂದಿ ಹಾಡಿ, ಪ್ರೇಮದ ವಿವಿಧ ಮುಖ ಗಳನ್ನೂ ಪ್ರಧಾನವಾಗಿ ಹೆಣ್ಣಿನ ದೃಷ್ಟಿಯಿಂದ-ಚಿತ್ರಿಸಿ ದ್ದಾರೆ. ಬಹುಮಟ್ಟಿಗೆ ಕವಿ ತಮ್ಮ ಉದ್ದೇಶದಲ್ಲಿ ಕೃತ ಕೃತ್ಯರಾಗಿದ್ದಾರೆ ಎನಿಸುತ್ತದೆ.

ಇಲ್ಲಿರುವ ಇಪ್ಪತ್ತೊಂದು ಪ್ರೀತಿ-ಗೀತೆಗಳಲ್ಲಿ ಭಾವ ನಾವೀನ್ಯ ಅಷ್ಟಾಗಿ ಕಂಡುಬರದು. ಅಲ್ಲಲ್ಲಿ ಬೇಂದ್ರೆಯವರ ಕಾವ್ಯದ ಹೊಳಹು ಇರುವಂತೆ ತೋರುತ್ತಿದೆ. ಆದರೆ ಈ ಹಾಡುಗಳಲ್ಲಿರುವ ಜಾನಪದ ಭಾಷೆಯ ಲಯವಿನ್ಯಾಸ, ಪ್ರಾಸದ ಬೆಡಗು ಮುಂತಾದ ಶಬ್ದಾಲಂಕಾರ ಮತ್ತು ಅದರಿಂದ ಹುಟ್ಟುದ ನಾದಲೀಲೆ ಮನೋಹರವಾದುದು, ಮರಳುಗೊಳಿಸುವಂಥದು. ಅದಕ್ಕಾಗಿಯೇ ಈ ಗೀತೆ ಗಳನ್ನೋದಬೇಕಷ್ಟೆ. ಎಷ್ಟೋ ವೇಳೆ ಗ್ರಾಮ್ಯ ಭಾಷೆ ಅಂತ್ಯಪ್ರಾಸದ ಪೂರೈಕೆಗೆ ಮಾತ್ರ ನೆರವಾಗುವದುಂಟು.

ಈ ಸಂಕಲನದ ಬಹುಪಾಲು ಕವನ ಸೃಷ್ಟಿ ಬುದ್ಧಿ ಜನ್ಯವೆನಿಸಿದರೂ, ಅನೇಕ ಕಡೆ ಪ್ರತಿಭಾ ವಿಲಾಸದಿಂದ ಮೂಡಿರುವ ಪಂಕ್ತಿಗಳಿವೆ, ಕಲ್ಪನಾ ವಿಶಿಷ್ಟತೆಯಿದೆ. ಬೆರಗುಗೊಳಿಸುವ ನುಡಿ ಚಿತ್ರಗಳಿವೆ. ಹೆಣ್ಣು ಹೃದಯದ ಸೂಕ್ಷ್ಮ ದರ್ಶನವಿದೆ.

'ನಾಜೂಕದ ನಾರಿ;' 'ನನಗೂ ಮಂದಿವಿ ಇಲ್ಲ ಇನ್ನು! 'ಬಡವರ ಮಗಳು' 'ಮೋಜಿನ' ಮಾಟ'' 'ಚದುರಿ ಸಾಕೀ ಸೋಗು!', 'ಯಾರು ಹೇಳು ಈಕೀ?' 'ಸೀಗಿ-ಹುಣ್ಣಿವಿ'— ಈ ಕವಿತೆಗಳು ಚೆನ್ನಾಗಿವೆ.

ನಾಜೂಕದ ನಾರಿ ರೋಹಿಣಿಯು ತಾರಿ
ನಿಂತಾಳ ಮಾಳಗೀ ಏರಿ
ನೋಡ್ತಾಳ ಯಾರದೋ ದಾರಿ, ದೂರ ನೋಟ
ಬೀರಿ, ಕೊರಳ ಮಾಡಿ ವಾರಿ

('ನಾಜೂಕದ ನಾರಿ')

ಎಂಬ ಸಾಲುಗಳಲ್ಲಿರುವ ಶಬ್ದ ಚಿತ್ರವನ್ನು ಮೆಚ್ಚ ಬಹುದು. ಇಂಥವು ಹಲವಾರಿವೆ.

ಬಡವರ ಮಗಳಿವಳಾದರು ಏನೋ-
ಹುಡುಗಿ ರೂಪವಂತಿ ಹೊಂದ್ಯಾವ
ನಮ್ಮ ನಮ್ಮ ಪ್ರೀತಿ

('ಬಡವರ ಮಗಳು')

ನಂದನವನದ ಪಾರಿಜಾತ-ಬಂದು ಭೂಮಿಗಿಳಿದ್ಯೆತೆವ್ವಾ!
ಮುಂದ ಹಿಂದಃ ಮ್ಯಾಲಕ ತೆಳಗಃ

ಚೆಂದs ಗಂಧs ಹರಡ್ಯೈತವ್ವಾ......
ನಂದನವನ ಪಾರಿಜಾತ ಬಂದು ಭೂಮಿಗಿಳದ್ಯೆತವ್ವಾ!
('ಮೋಜಿನ ದೂಟ')

ಹೋಗಿ ಬಾ ತಂಗಿ, ಮನಿಯು ಸಿರಿಗಂಗಿ
ಇನ್ನು ತವರ ಮರಿಯು......
ಪ್ರೀತಿ ಕಡಲುಕ್ಕಿ ಮೊರೆಯುತದ ಸೊಕ್ಕಿ
ಹೋಗಿ ಆದಕ ಬೆರಿಯು !
('ಅಕ್ಕನ ಆಶೀರ್ವಾದ')

ಎಲ್ಲಿಂದೀಕಿನ ಕರತಂದೆಣ್ಣಾ, ಯಾರು ಹೇಳು ಈಕಿ;
ಅಣ್ಣಾ ಯಾರು ಹೇಳು ಈಕಿ? ...
ಮಲ್ಲಿಗಿ ದಂಡಿಯು ಮಧುಪರಿಮಳs ತೂರುತ ಬಂದಾಕಿ!
('ಯಾರು ಹೇಳು ಈಕಿ')

ಅನ್ನ ಕುಮಾರನ ಬಸುರಿಯದಾಳ ನಮ್ಮ ಭೂಮಿ ದೇವಿ
ಬಯಕೆಯು ಊಟ ಉಣಿಸಬೇಕs ಬಂದ್ಯೆತಿ ಸೀಗಿ ಹುಣ್ಣಿವಿ
(ಸೀಗಿ ಹುಣ್ಣಿವಿ)

ಮುಂತಾದವು ಉತ್ತಮ ಕಾವ್ಯಗುಣದಿಂದ ಹೃದ್ಯವಾಗಿವೆ.

'ದೇವರ ದೇವರು' ಎಂಬ ಕವಿತೆಯಲ್ಲಿ ಅಪೂರ್ವವಾದ ಭಾವ ಸರಣಿಯಿದೆ. ದೇವರೂ ಏಕ ಪತ್ನೀ ವ್ರತಸ್ಥನಾಗಿ ಬಾಳಿಲ್ಲ; ವಿಶ್ವಾಸನೀಯನಾದ ತನ್ನ ಪತಿ. ಅಂಥ ದೇವತೆಗಿಂತ ಮಿಗಿಲೆಂದುಕೊಂಡು ಹಾಡುತ್ತಾಳೆ- ಒಬ್ಬ ಗರತಿ;

ದೇವರದೆಂತಾ ದೊಡ್ಡಸ್ತಿಕಿ ಬಿಡು
ತನ್ನ ದೊರಿಯು ಮೇಲs...
ನನ್ನ ಹೊರತು ಇನ್ನೊಂದು ಹೆಣ್ಣ ವಾ್ಯ
ಲಿಲ್ಲ ಅವಗ ಖ್ಯಾಲs!

ಕಡೆಯಲ್ಲಿರುವ 'ಶ್ರಾವಣ ಬಂತು' ಎಂಬ ಪುಟ್ಟ ಗೀತರೂಪಕ ಶ್ರಾವಣದ ಆಗಮನ ಮತ್ತು ವೈಭವವನ್ನು ಮನಸಿಗೆ ತರುತ್ತದೆ.

ಏಳು ಶ್ರಾವಣರಾಜ, ಏಳು ಭೂವನದೋಜ.
ಏಳು ಜೀವನತೇಜ, ಕಾಲಸುರಭೂಜ ! ... ...

ಎಂಬ ವೃಂದಗೀತದೊಡನೆ ಪ್ರಾರಂಭವಾಗುವ ಈ ಕಲಾತ್ಮಕ ರೂಪಕದಲ್ಲಿ ಪ್ರಕೃತಿಯೂ ನದಿ, ಪಕ್ಷಿ, ಪುಷ್ಪಗಳ ರೂಪದಲ್ಲಿ ಪಾತ್ರ ವಹಿಸುತ್ತದೆ. ತಕ್ಕ ತಂತ್ರ ಸಿದ್ಧತೆಗಳೊಡನೆ ಇದು ಪ್ರಸಾರವಾದರೆ ಅಥವಾ ರಂಗದ ಮೇಲೆ ಬಂದರೆ ರಸಾಸ್ವಾದನೆಗೆ ಅನುಕೂಲ,

ಮೋಹಕವಾದ ಈ 'ನಲ್ವಾಡು'ಗಳನ್ನು ಓದಿ, ಕೇಳಿ ಯಾರೂ ನಲಿಯಬಹುದು.

–ಹ. ಶಿ. ಭೈರನಟ್ಟಿ

# ಡಾ. ಬೆಟಗೇರಿ ಕೃಷ್ಣಶರ್ಮರ ಸಾಹಿತ್ಯ ಪರಿಚಯ

ಕಾವ್ಯ, ಕಥೆ, ಕಾದಂಬರಿ. ರೂಪಕ, ಪ್ರಬಂಧ ಮುಂತಾದ ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿ ಕನ್ನಡ ಸಾರಸ್ವತ ಲೊಕಕ್ಕೆ ಚಿರಪರಿಚಿತರಾಗಿರುವ ಡಾ॥ ಬೆಟಗೇರಿ ಕೃಷ್ಣಶರ್ಮರು ಮೂಲತಃ ಜಾನಪದ ಜಾನಪದರ ಸತ್ತ್ವವೈಗೂಡಿಸಿಕೊಂಡ ಸಾಹಿತಿ. ಕೃಷ್ಣಶರ್ಮರು ಜನಿಸಿದ್ದು ೧೯೦೦ ನೆಯ ಇಸ್ವಿ ಎಪ್ರಿಲ್ ೧೬ ರಂದು, ಗೋಕಾಕ ತಾಲೂಕಿನ ಬೆಟಗೇರಿ ಗ್ರಾಮದಲ್ಲಿ. ಗ್ರಾಮೀಣ ಜನತೆಯ ರೀತಿ–ನೀತಿಗಳನ್ನು, ಅವರ ಜೀವನದ ಆಗು-ಹೋಗುಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತ, ಬದುಕಿನ ನೋವು-ನಲಿವುಗಳನ್ನು ವಾಸ್ತವಿಕವಾಗಿ, ಪ್ರಾಮಾಣಿಕವಾಗಿ ತಮ್ಮ ವಿಶಿಷ್ಟ ಶೈಲಿಯಿಂದ ಅಭಿವ್ಯಕ್ತಗೊಳಿಸಿದ್ದು ಅವರ ಬರಹಗಳಲ್ಲಿ ಸುಸ್ಪಷ್ಟ.

ಕೃಷ್ಣಶರ್ಮರ ತಂದೆಗೆ ಸಂಗೀತದಲ್ಲಿ ಅಪಾರ ಆಸಕ್ತಿ. ಸಂಪ್ರದಾಯಸ್ಥ ಮನೆತನ. ಮನೆಯಲ್ಲಿ ನಡೆಯುವ ಪೂಜೆ–ಪುನಸ್ಕಾರ, ಆಚಾರ–ವಿಚಾರಗಳನ್ನು ವಿಶೇಷವಾಗಿ ಗಮನಿಸುತ್ತಿದ್ದ ಕೃಷ್ಣಶರ್ಮರು ಆ ಸಮಯದಲ್ಲಿ ಹಾಡುವ ಹಾಡುಗಳನ್ನು ಕಂಠಪಾಠ ಮಾಡಿಬಿಡುತ್ತಿದ್ದರು. ಬೀಸುವ ಕಲ್ಲಿನ ಹಾಡುಗಳು, ಜೋಗುಳ ಪದಗಳು, ಮದುವೆ–ಮುಂಜಿವೆ, ಬಸಿರು–ಬಾಣಂತತನ ಮುಂತಾದ ಸಂಪ್ರದಾಯಶೀಲ ಆಚರಣೆಗಳು ಅವರ ಮನಸ್ಸಂಸ್ಕಾರಕ್ಕೆ ಕಾರಣವಾದವು. ಶ್ರೀಕೃಷ್ಣ ಪಾರಿಜಾತ, ಸಂಗ್ಯಾಬಾಳ್ಯಾ ಬಯಲಾಟಗಳನ್ನು ಎಷ್ಟು ಸಲ ನೋಡಿದರೂ ಇವರಿಗೆ ತೃಪ್ತಿಯಿಲ್ಲ. ಬಾಲ್ಯದ ಈ ಜಾನಪದ ಪರಿಸರವೇ ಅವರ ಕಾವ್ಯಶಕ್ತಿಗೆ–ಬರಹಗಳಿಗೆ ಪ್ರೇರಕ. ಹಬ್ಬ ಹುಣ್ಣಿವೆಗಳಲ್ಲಿ ಹೆಣ್ಣುಮಕ್ಕಳು ಹಾಡುವ ಹಾಡುಗಳ ಸಂಗ್ರಹಣೆಯೊಂದಿಗೆ ಸ್ವತಂತ್ರವಾಗಿ ಕಾವ್ಯ ರಚಿಸಲು ಪ್ರಾರಂಭಿಸಿದ್ದು ೧೯೧೮ ರಲ್ಲಿ. ಭಾಮಿನಿ ಷಟ್ಪದಿಯಲ್ಲಿ ಬರೆದ 'ಭಕ್ತಿ ಕುಸುಮಾವಳಿ' ಎಂಬ ಅವರ ಮೊದಲ ಕವಿತೆ ಧಾರವಾಡದ 'ಪ್ರಭಾತ' ಎಂಬ ಮಾಸಪತ್ರಿಕೆಯಲ್ಲಿ ಬೆಳಕು ಕಂಡಿತು. ಊಟಕ್ಕೆ ಕುಳಿತಾಗ ಆ ಸಂಚಿಕೆ ಅವರಿಗೆ ಕೈಸೇರಿತಂತೆ. ಊಟವನ್ನೂ ಬಿಟ್ಟು ಮೇಲೆದ್ದು ಕುಣಿದಾಡಿದ್ದು ಇನ್ನೂ ನೆನಪಿದೆ ಎಂದು ಕೃಷ್ಣಶರ್ಮರು ಅದೇ ಸಂತೋಷವನ್ನು ಈಗಲೂ ವ್ಯಕ್ತಪಡಿಸುತ್ತಾರೆ.

೧೯೨೯ ರಲ್ಲಿ ಬೆಳಗಾವಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಪಾಲ್ಗೊಂಡು ತಾವು ಸಂಗ್ರಹಿಸಿದ ಜಾನಪದ ತ್ರಿಪದಿಗಳನ್ನು ಲಯಬದ್ಧವಾಗಿ ಹಾಡಿ ತೋರಿಸಿದಾಗ ಬಿ. ಎಂ. ಶ್ರೀ ಕಂಠಯ್ಯನವರು ಮೆಚ್ಚಿ ತಲೆದೂಗಿದರು. ಸಭಿಕರು ಉತ್ಸಾಹ ಚಿಮ್ಮಿದರು. ಜಾನಪದ ಹಾಡುಗಳ ಮಹಿಮೆಯನ್ನು ಜನತೆ ಕಂಡುಕೊಂಡಿದ್ದು ಆಗಲೇ. ಇಷ್ಟೊಂದು ಪ್ರಭಾವಪೂರ್ಣ ಶಕ್ತಿ ಜಾನಪದ ಹಾಡುಗಳಲ್ಲಿದೆಯೆಂಬುದನ್ನು ಸಭಿಕರು ಅವರೆಗೆ ಮನಗಂಡಿರಲಿಲ್ಲ. ಕೃಷ್ಣಶರ್ಮರು ಈ ಉತ್ತೇಜನದಿಂದಾಗಿ ಸಹಜವಾಗಿಯೇ ಜಾನಪದದ ಮೊರೆಹೊಕ್ಕರು.

## ಕಾವ್ಯ

೧೯೩೬ ರಿಂದ ೧೯೭೨ ರವರೆಗೆ ಕೃಷ್ಣಶರ್ಮರ 'ಮುದ್ದನ ಮಾತು', 'ಅರುಣೋದಯ,' 'ವಿರಹಿಣಿ', 'ಒಡನಾಡಿ,' 'ಕಾರಹುಣ್ಣಿವೆ,' 'ನಲ್ವಾಡುಗಳು,' 'ಉತ್ಸಾಹಗಾಥಾ' ಎಂಬ ಏಳು ಕವನ ಸಂಗ್ರಹಗಳು ಪ್ರಕಟವಾಗಿವೆ.

'ಮುಂದ್ನನ ಮಾತು'ಮೊದಲ ಕವನ ಸಂಗ್ರಹ, ೧೯೫೬ ರಲ್ಲಿ ಪ್ರಕಟಗೊಂಡು ಈಗ ದ್ವಿತೀಯ ಮುದ್ರಣ ಕಂಡಿದೆ. ಮಗುವಿನ ಸಹಜ, ಮುಗ್ಧ ಭಾವನೆಗಳನ್ನು ಈ ಸಂಗ್ರಹದಲ್ಲಿ ಮನೋಹರವಾಗಿ ಸೆರೆ ಹಿಡಿಯಲಾಗಿದೆ. ಹೊಸ ಪರಿಸರಕ್ಕೆ ಮಗು ಹೊಂದಿಕೊಳ್ಳುತ್ತಿರುವ ಸಹ ಜತೆ, ಇತರ ಮಕ್ಕಳೊಂದಿಗಿನ ವರ್ತನೆ, ಆಟ–ಆಟಿಕೆ ಗಳೊಡಗಿನ ಬಾಂಧವ್ಯ ಮೊನಚು ಮಾತುಗಳು ಈ ಸಂಗ್ರಹದೊಳಗಿನ ನಾಲ್ವತ್ತು ಕವನಗಳಲ್ಲಿ ಅಡಕವಾಗಿವೆ. ಮಗುವಿನ ಕಿಲಾಡಿತನದ ಪರಿಚಯವೂ ಇಲ್ಲಿಯ ಕವನ ಗಳಲ್ಲಿದೆ. 'ಗುಡಿಯ ಮುಂದಿನ ಗಿಡದಿ ಮಂಗ ಕುಳಿತಿ ಹುದಂತೆ/ಹೋಗಿ ಕಲ್ಲೆಸೆದು ಬರಲೇ ?/ ಹುಡುಗರೆಲ್ಲರು ಗುಬ್ಬಿ ಮನೆಮಾಡಿಯಾಡುವರು/ ಹೋಗಿ ನಾ ಕೆಡಿಸಿ ಬರಲೆ?' –ಎಂಬ ಪದ್ಯ ಕಿಲಾಡಿತನಕ್ಕೆ ಸಾಕ್ಷಿಯಾಗಿದೆ. ಮಗು ತನ್ನ ಅಮ್ಮನಿಗೆ ಕೇಳುವ ಅನೇಕ ಸಹಜ ಪ್ರಶ್ನೆ ಗಳನ್ನು ಇಲ್ಲಿಯ ಕವನಗಳಲ್ಲಿ ಕಾಣುತ್ತೇವೆ. 'ಇನಿತು ಆತುರದಿ ಹೋಗುವವೆಲ್ಲಿ ಹಕ್ಕಿಗಳು?' ಎಂದು ಕೇಳಿ 'ಮನೆಯಲಿಹ ಮರಿಗಳನು ಮುದ್ದಿಸಲಿಕೇನಮ್ಮ ?' ಎಂದು ಉತ್ತರವನ್ನು ತಾನೇ ಊಹಿಸುತ್ತಾನೆ. ಮಗು ವಿನ ಮುಗ್ಧ ಮನಸ್ಸಿನ ಹಲವಾರು ಪದರುಗಳನ್ನು ಈ ಸಂಗ್ರಹದಲ್ಲಿ ಎತ್ತಿ ತೋರಿಸಿದ್ದಾರೆ.

'ಅರುಣೋದಯ' ಪ್ರಕಟವಾದುದು ೧೯೫೭ರಲ್ಲಿ. ಇದೂ ದ್ವಿತೀಯ ಮುದ್ರಣ ಕಂಡಿದೆ. ಇದರೊಳಗಿನ ಕವನಗಳು ದೇಶಭಕ್ತಿ, ದೇಶಾಭಿಮಾನ ಮೂಡಿಸುವಂತ ಹವು: ಕನ್ನಡ ನಾಡು–ನುಡಿ–ಸಂಸ್ಕೃತಿ ಕುರಿತು ಹೆಮ್ಮೆ ಪಡುವಂತಹವು. ಕೃಷ್ಣಶರ್ಮರ ಜನಪ್ರಿಯ ಕವಿತೆ 'ಎನಿತು ಇನಿದು ಈ ಕನ್ನಡ ನುಡಿಯು' ಈ ಸಂಕಲನ ದಲ್ಲಿದೆ. ಕನ್ನಡವು ಕರ್ಕಶವೆಂದು ಹೀಗಳೆದು ನುಡಿಯು ವವರನ್ನು ನೋಡಿ ಕೆಣಕಿದವನಾಗಿ ಈ ಕವನವನ್ನು ರಚಿಸಿದೆನೆಂದು ಕೃಷ್ಣಶರ್ಮರು ಹೇಳುತ್ತಾರೆ. ವಿಜಯ ನಗರ ಸಾಮ್ರಾಜ್ಯದ ಗತವೈಭವ ಕುರಿತು ಬರೆದ ಪದ್ಯ ಗಳನ್ನು ಓದತೊಡಗಿದಂತೆ ನಮ್ಮ ನಾಡಿನ ಇತಿಹಾಸದ ಬಗ್ಗೆ ಹೆಮ್ಮೆಯೆನಿಸುತ್ತದೆ. ಆದರೆ ಹಂಪೆಯ ಈಗಿನ ಸ್ಥಿತಿ ನೆನಪಾದರೆ ಮರುಕವೂ ಉಂಟಾಗುತ್ತದೆ.

'ವಿರಹಿಣಿ' ಪ್ರೇಮ ಕವಿತೆಗಳ ಸಂಕಲನ. ಹೆಸರಿಗೆ ತಕ್ಕಂತೆ ಇಲ್ಲಿಯ ಕವಿತೆಗಳು ವಿರಹಿಣಿಯ ವೇದನೆಯನ್ನು ಹಲವಾರು ಮುಖಗಳಲ್ಲಿ, ಹಲವಾರು ಸನ್ನಿವೇಶಗಳಲ್ಲಿ ವ್ಯಕ್ತಪಡಿಸುತ್ತವೆ. ನಲ್ಲನನ್ನು ಕಾಣುವತನಕ, ದಿನಗಳ ಲೆಕ್ಕ, ನೂಕುವ ದಿನಗಳಲ್ಲಿ ಉಂಟಾಗುವ ತಳಮಳ ಗಳನ್ನು ಕೃಷ್ಣಶರ್ಮರು ಚೆನ್ನಾಗಿ ಚಿತ್ರಿಸಿದ್ದಾರೆ. 'ಹೆಣ್ಣದುಕನೇಕೆ ಹಾಕಿತು ದೈವ? ಇನಿತೆಂದು/ ಹಂಬ ಲಿಸಿ ಹಂಬಲಿಸಿ ಹಲಂಬಲೆಂದೇ?' ಎಂದು 'ವಿರಹಿಣಿ' ಕೇಳುವಾಗ ಅವಳ ಮನಸ್ಸಿನ ನೋವು ಎಷ್ಟೆಂದು ಅರಿ ವಾಗುತ್ತದೆ. ನಲ್ಲನನ್ನು ಮರೆಯುವದಂತೂ ಅವಳಿಗೆ ಅಸಾಧ್ಯ. 'ನಿನ್ನ ಮರಸುವ ಚಿನ್ನ ರನ್ನದುಡುಗೆಗಳು ಮಣ್ಣುಗೂಡಲಿ' ಎಂದು ಚಿನ್ನ ರನ್ನಗಳನ್ನೂ ತಿರಸ್ಕರಿ ಸುತ್ತಾಳೆ. ಇದೇ ಸಂಗ್ರಹದಲ್ಲಿಯ 'ಶಬರಿಯ ಬಾಳು' ಒಂದು ನೀಳ್ಗವನ. ಶಬರಿಯ ಅಂತರಂಗವನ್ನು ರಗ ಳೆಯ ಶೈಲಿಯಲ್ಲಿ ಲಯಬದ್ಧವಾಗಿ, ಭಾವಮಯವಾಗಿ ಚಿತ್ರಿಸುತ್ತದೆ.

'ಒಡನಾಡಿ' ಇದೂ ಪ್ರಣಯ ಗೀತೆಗಳ ಸಂಕಲನ. 'ವಿರಹಿಣಿ'ಯ ಗೀತೆಗಳಂತೆ ಇಲ್ಲಿಯ ಕವಿತೆಗಳೂ ಭಾವೋತ್ಕಟತೆಯನ್ನು ಹೊಂದಿವೆ, ವೈವಿಧ್ಯಮಯ ವಾಗಿವೆ. ಕವಿಯ ಬೆಳವಣಿಗೆಯನ್ನು ಇಲ್ಲಿ ಕಾಣ ಬಹುದು. ಈ ಸಂಗ್ರಹದೊಳಗಿನ 'ಒಡನಾಡಿ' ಒಂದು ದೀರ್ಘಕವನ. ಸುಮನ ಕಲ್ಯಾಣಪುರ ಹಾಡಿದ ಈ ಗೀತೆ ಯನ್ನು 'ಕಲಾವತಿ' ಚಲನಚಿತ್ರಕ್ಕಾಗಿ ಉಪಯೋಗಿಸಿ ಕೊಂಡಿದ್ದಾರೆ. 'ಒಡನಾಡಿ ಬೇಕೆಂದು ಮಿಡುಕಿಯೇ ಮಿಡುಕಿದೆನು, ಕಡೆಗೆ ನೀ ಬಂದೆನ್ನ ಮಿಡುಕ ಕಳೆದ' ಎನ್ನುತ್ತ 'ಬೆಳಕಿನ ಮೊಗ ತೋರಿಸಿದೆ; ನಿನ್ನೊಂದು ಗೂಡೆ ಹೊಸಬಣ್ಣ ಬಂದಿತು' ಎಂದು ಹೇಳಿದರೂ ತೃಪ್ತಿಯಿಲ್ಲ. 'ನಿನ್ನಿಂದಲೇ ಹಗಲು, ನಿನ್ನಿಂದ ಇರುಳು' ಎಂದನಾ ಹೇಳಿದಾಗಲೇ ತೃಪ್ತಿ ! ಮುಗ್ಧ ಪ್ರಣಯಿಗಳ

ಭಾವವಿನಿಮಯವನ್ನು ಇಲ್ಲಿಯ ಹಲವಾರು ಕವನಗಳಲ್ಲಿ ಅಹ್ಲಾದಕರ ಶೈಲಿಯಲ್ಲಿ ಸೆರೆಹಿಡಿಯಲಾಗಿದೆ. ಮನೆಯಲ್ಲಿ ಕತ್ತಲು ಆವರಿಸಿದಾಗ ದೀಪ ಹಚ್ಚುವ ನಲ್ಲೆ ಮನಸ್ಸನ್ನೂ ಬೆಳಗುತ್ತಾಳೆ-ಎನ್ನುತ್ತದೆ ಕವಿಹೃದಯ !

'ಕಾರಹುಣ್ಣಿವೆ' ಕವನ ಸಂಗ್ರಹದಲ್ಲಿ ಪ್ರಕೃತಿಯ ಕುರಿತು ಬರೆದ ಕವಿತೆಗಳಿಗೆ ಪ್ರಾಮುಖ್ಯತೆ. ಪ್ರಕೃತಿಯ ರಮ್ಯತೆಯನ್ನು ದೈವೀಕೃತಗೊಳಿಸಲು ಪೂರಕವಾಗುವಂತಹ ಸಮರ್ಥನೀಯ ಕವನಗಳನ್ನು ಇದು ಹೊಂದಿದೆ. ಬಡವರ ಬರಿಯೊಡಲಿನಂತೆ ಬಾನೆಲ್ಲಾ ಬರಿದು ಇರುವಾಗ, ಉಡಿಗೆಯಿರದ ಗರತಿಯಂತೆ ಬುವಿಯೆಲ್ಲಾ ತೆರಹು ಇರುವಾಗ, ಕಾರಹುಣ್ಣಿವೆಗೆ 'ಬಾ' ಎಂದು ಆಹ್ವಾನಿಸುವ ಕವಿ 'ಶ್ರಾವಣ ಸಮೀರ'ನಿಗೆ 'ಕಾಲಸೊಲುಮೆಯೊಲೆಕಾರ, ಸುಖನಾಟಕದ ಸೂತ್ರಧಾರ, ಬುವಿಯ ಬೇಟೆಗಾರ' 'ಬಾ' ಎಂದು ಆಹ್ವಾನಿಸುತ್ತದೆ. ಪ್ರಕೃತಿಯ ಸಹಜತೆಗಳಿಗೆ ಕಲ್ಪನಾಕಾರ ಕವಿ ಮಾನವತೆಯ ರೂಪುಗೊಟ್ಟು ದೈವೀಮಟ್ಟಕ್ಕೇರಿಸುವ ಆಶಾದಾಯಕ ಕವನಗಳು ಕವಿಯ ತತ್ವಜ್ಞಾನದ ಒಲವು ನಿಲುವುಗಳನ್ನು ತೋರಿಸುತ್ತವೆ. ಈ ಸಂಗ್ರಹದಲ್ಲಿ ಸರ್ವಜ್ಞ, ವಲ್ಲಭಭಾಯಿ, ಮಹಾತ್ಮಾಗಾಂಧೀ ಕುರಿತು ಕವಿತೆಗಳೂ ಇವೆ; 'ಪ್ರಜಾರಾಜ್ಯ', 'ಕನ್ನಡಿಗರ ಹಾಡು' 'ಸ್ವಾತಂತ್ರ್ಯ', 'ಜಯಭಾರತ' ಮುಂತಾದ ದೇಶಭಕ್ತಿ ಕವಿತೆಗಳೂ ಇವೆ. ಇದು ವೈವಿಧ್ಯಮಯ ಕವನ ಸಂಗ್ರಹ.

'ನಲ್ವಾಡುಗಳು' ಹೆಸರಿಗೆ ತಕ್ಕಂತೆ ಪ್ರೀತಿಗೀತೆಗಳ ಸಂಗ್ರಹ. ಜಾನಪದ ಭಾಷೆ-ಭಾವಗಳನ್ನು ಭಾವಗೀತೆಗಳಲ್ಲಿ ತುಂಬಿ ಅಧಿಕಾರಯುತವಾಗಿ ಬರೆಯಬಲ್ಲ ಕವಿಯಿಂದ ರೂಪಿತಗೊಂಡ ಇಪ್ಪತ್ತೊಂದು ಭಾವ-ಗೀತೆಗಳನ್ನು ಈ ಸಂಗ್ರಹ ಹೊಂದಿದೆ. ತಾರುಣ್ಯದ ಪ್ರಾರಂಭದ ಸ್ತ್ರೀ ಪುರುಷರ ನೈಸರ್ಗಿಕ ಆಕರ್ಷಣೆಯಿಂದ ಮೊದಲು ಮಾಡಿ ದಾಂಪತ್ಯ ಜೀವನದ ಪರಿಪಕ್ವ ಹೃದಯದವರೆಗೆ ಪ್ರೀತಿಯ ಬೇರೆ ಬೇರೆ ಸ್ವರೂಪ ಇಲ್ಲಿಯ ಗೀತಗಳಲ್ಲಿ ಪ್ರಕಟವಾಗಿದೆಯೆಂದು 'ಮೊದಲ ಮಾತು' ಹೇಳುತ್ತದೆ. 'ನಾ ಸಂತಿಗೆ ಹೋಗಿನ್ನಿ, ಆಕಿ ತಂದಿದ್ದಳೋ ಬೆಣ್ಣಿ', 'ಬುತ್ತಿ ತಗೊಂಡ ಹೋಗ್ತಿನಿ ಹೊಲಕ' 'ಯಾತಕವ್ವಾ ಹುಬ್ಬಳ್ಳಿ-ಧಾರ್ವಾಡಾ' ಮುಂತಾದ ಹಾಡುಗಳನ್ನು (ಶ್ರೀಯುತ ಹುಕ್ಕೇರಿ ಬಾಳಪ್ಪನವರು ಹಾಡಿ ಕೃಷ್ಣಶರ್ಮರ ಈ ಜನಪ್ರಿಯ ಕವಿತೆಗಳು ಹಳ್ಳಿಯ ಅನಕ್ಷರಸ್ಥರ ಬಾಯಲ್ಲೂ ಉಳಿಯುವಂತೆ ಮಾಡಿದರು. ಸರಳತೆ, ತಿಳಿಹಾಸ್ಯ, ಗತ್ತು-ಲಯಗಳಿಂದ ಕೂಡಿದ ಲಾವಣಿ ಶೈಲಿಯ ಈ ಪ್ರೀತಿ ಗೀತೆಗಳು ಕೃಷ್ಣಶರ್ಮರು ಜಾನಪದವನ್ನು ಅಭಿಜಾತವನ್ನಾಗಿ ಪರಿವರ್ತಿಸುವ ಶಕ್ತಿಯನ್ನು ಜಾಹೀರುಗೊಳಿಸುತ್ತವೆ.

'ಉತ್ಸಾಹ ಗಾಥಾ' ಕೃಷ್ಣಶರ್ಮರ ಸಾಮಾಜಿಕ ಕಳಕಳಿ-ಜವಾಬ್ದಾರಿಯನ್ನು ಪ್ರತಿಬಿಂಬಿಸುವ ಕವನ ಸಂಕಲನ—೧೯೭೨ ರಲ್ಲಿ ಪ್ರಕಟವಾದುದು. ಇದರೊಳಗೆ ಮೂವತ್ತು ಭಾವಕವನಗಳಲ್ಲದೆ ಕೊನೆಯಲ್ಲಿ ಉತ್ಸಾಹ ಭಾವವೇ ಸ್ಥಾಯಿಯಾಗಿರುವ ಸಂಗೀತ ರೂಪಕವೂ ಇದೆ. ಕನ್ನಡ ಕವಿತೆಯ ಸ್ವರೂಪ ದಿನದಿನಕ್ಕೂ ಮಾರ್ಪಾಡಾಗುತ್ತ ನಡೆದಿರುವ ಸಮಯದಲ್ಲಿ ಹೊಸದಾಗಿ ಕವನ ರಚಿಸುವವರು ಹೆಚ್ಚಾಗಿ ನವ್ಯಮಾರ್ಗದಿಂದಲೇ ಹೊರಟವರಾಗಿದ್ದಾರೆ. ನವ್ಯದಲ್ಲಿಯ ಕಾವ್ಯ ಸತ್ವ-ವಿಚಾರ ನಿರ್ಭರತೆಗಳ ಸಮನ್ವಯ ಸೌಂದರ್ಯವಿರಬೇಕೆಂಬುದು ಕೃಷ್ಣಶರ್ಮರ ಆಶಯ. ಅಂತಹ ಸತ್ವ-ಶಕ್ತಿಗಳಿರದ ವಾಕ್ಯಮಾಲೆಗಳು ಎಂದೂ ನವ್ಯ ಕಾವ್ಯ ಎನಿಸವು. ಪರಂಪರೆಯ ಕವನವೇನು, ನವ್ಯ ಕವನವೇನು, ಅದರಲ್ಲಿ ಶಕ್ತಿ-ಸೌಂದರ್ಯಗಳಿದ್ದಾಗಲೇ ಅದಕ್ಕೆ ಶಾಶ್ವತೆಯ ಸ್ಥಾನಮಾನಗಳು ಸಹೃದಯದಿಂದ ದೊರೆಯುವವು-ಎಂದು 'ಉತ್ಸಾಹ ಗಾಥಾ'ದ ಮೊದಲ ನುಡಿಯಲ್ಲಿ ಹೇಳಿದ್ದಾರೆ. ಕೃಷ್ಣಶರ್ಮರ ಕೃತಿಗಳು ಆಶಾವಾದಿತ್ವವನ್ನು ಪ್ರಕಟಿಸುತ್ತವೆ. 'ಉತ್ಸಾಹಗಾಥಾ' ಕವನದಲ್ಲಿ 'ಏಸೋ ಶತಮಾನಗಳ ಪರದಾಸ್ಯ ಪಾಶಗಳ /ಓಸರಿಸಿ ಭಾರತೀಯು ಮುಕ್ತಳಾಗಿಹಳು /ಇನ್ನು ಮುಂದೆಂದೆಂದು ಪರದಾಸ್ಯದುರುಳಿಂಗೆ ಗುರಿಯಾಗಬಾರದಲ್ಲವೆ ತಾಯಕೊರಳು?/ ಅದಕ್ಕಾಗಿ / ಪ್ರತಿಯೊಬ್ಬ ಭಾರತೀಯನ ಧಮನಿಗಳಲಿ/ ಉತ್ಸಾಹ ರಸವೊಂದೆ ದುಮುದುಮಿಸುತಿರಲಿ'- ಎಂದು ಔಚಿತ್ಯಪೂರ್ಣವಾಗಿ ಹೇಳಿದ್ದಾರೆ. ಪ್ರಸ್ತುತ ವೈಜ್ಞಾನಿಕ ಯುಗದಲ್ಲಿ ಮಾನವರು ಮಾನವೀಯತೆಯನ್ನು ಕಳೆದುಕೊಳ್ಳ

ತ್ತಿರುವದನ್ನು ಗಮನಿಸಿ ಚಿಂತಿಸಿದಾಗ ಹೊರ ಹೊಮ್ಮಿದ 'ವಿಜ್ಞಾನಿಗೆ ವಿಜ್ಞಪ್ತಿ' ಎಂಬ ಕವನದಲ್ಲಿ ವಿಜ್ಞಾನದ ಆವಿಷ್ಕಾರಗಳನ್ನು ವರ್ಣಿಸುತ್ತ 'ನೀನಿತ್ತ ಬಲದಿಂದ ಜಗವ ಜಯಿಸಲು ಬಹುದು, ಒಂದೆ ನಿಮಿಷದಲಿ ಪ್ರಳಯವು ಕರೆಯಲುಬಹುದು' ಎಂದಿದ್ದಾರೆ. ಕವಿಯ ಆಶಯ ಕೊನೆಯ ನುಡಿಯಲ್ಲಿ ವ್ಯಕ್ತವಾಗಿದೆ. 'ಮೊದಲು ಮಾನವತೆಯ ನರಳಿಸಯ್ಯ, ಆ ಬಳಿಕ ಯಾವ ಲೋಕಕು ಹೊರಡಿಸಯ್ಯಾ' ಎಂದು ವಿಜ್ಞಾನಿಗೆ ಬಿನ್ನವಿಸಿಕೊಂಡಿದ್ದಾರೆ. ಸಮಕಾಲೀನ ಬದುಕಿಗೆ ಪ್ರತಿಸ್ಪಂದಿಸುವ, ಇಂದಿನ ವಾಸ್ತವಿಕ ಜೀವನದ ಚಿತ್ರಣವನ್ನು ನಿಚ್ಚಳವಾಗಿ ತೋರಿಸುವ ಈ ಸಂಗ್ರಹದೊಳಗಿನ ಕವಿತೆಗಳು ನಮ್ಮ ವೈಚಾರಿಕತೆಗೆ ಪುಷ್ಟಿ ನೀಡುತ್ತವೆ, ಯೋಚನಾಮಗ್ನರಾಗಲು ಪ್ರೇರೇಪಿಸುತ್ತವೆ.

ಪ್ರೀತಿ, ಪ್ರೇಮ, ಪ್ರಣಯಗಳ ಜೊತೆಗೆ ವಿರಹ ವೇದನೆಯನ್ನೂ ಮೂಡಿಸುವ, ಕಂದನ ತೊದಲು ನುಡಿಗಳ ಸವಿಯನ್ನುಣಿಸುತ್ತ, ದೇಶಾಭಿಮಾನವನ್ನು ಬೆಳೆಸುವ ಸಾಮಾಜಿಕ ಜವಾಬ್ದಾರಿಯನ್ನು ತಿಳಿಸುವ, ಎಚ್ಚರಿಸುವ ವೈಶಿಷ್ಟ್ಯಮಯ ಕವನಗಳನ್ನು ಹೊಂದಿದ ಕೃಷ್ಣಶರ್ಮರ ಈ ಏಳು ಕವನ ಸಂಕಲನಗಳು ಕಾವ್ಯಾಸಕ್ತರ ಗಮನ ಸೆಳೆಯುವಲ್ಲಿ ಸಫಲವಾಗಿವೆ.

**ಕಥೆಗಳು :**

೧೯೩೨ ರಿಂದ ೧೯೬೪ ರ ಅವಧಿಯಲ್ಲಿ ಕೃಷ್ಣಶರ್ಮರ 'ಬಡತನದ ಬಾಳು,' 'ಸಂಸಾರ ಚಿತ್ರ,' 'ನಮ್ಮ ಬದುಕು', 'ಮಾತನಾಡುವ ಕಲ್ಲು', 'ಜನಪದ ಜೀವನ', 'ಕಳ್ಳರ ಗುರು ಮತ್ತು ಇತರ ಕಥೆಗಳು' ಎಂಬ ಆರು ಕಥಾಸಂಗ್ರಹಗಳು ಪ್ರಕಟವಾಗಿವೆ. 'ದಶ ಮಂಜರಿ' ಎಂಬುದು ಅವರ ಆಯ್ದ ಕತೆಗಳ ಸಂಗ್ರಹ.

'ಬಡತನದ ಬಾಳು' ಪ್ರಥಮ ಕಥಾ ಸಂಗ್ರಹ-೧೯೩೨ರಲ್ಲಿ ಪ್ರಕಟವಾದುದು. ಇದರಲ್ಲಿ 'ಈ ಚಿತ್ರ-ಆ ಚಿತ್ರ', 'ಬಹಿಷ್ಕಾರ', 'ಹೊಟ್ಟೆಯ ಹೋರಾಟ', ರಾಜನ ಧರ್ಮ, ಸಂಶೋಧನೆ ಎಂಬ ನಾಲ್ಕು ಕಥೆಗಳಿವೆ, 'ಈ ಚಿತ್ರ-ಆ ಚಿತ್ರ'ದಲ್ಲಿ ಶ್ರೀಮಂತಿಕೆ ಹಾಗೂ ಬಡತನಗಳ ತುಲನಾತ್ಮಕ ಚಿತ್ರಣವಿದೆ. ಶ್ರೀಮಂತ ನಾಯಕನ ಆಳು ಮಾದ. ನಾಯಕನ ಶ್ರೀಮಂತಿಕೆಯ ದಬ್ಬಾಳಿಕೆಯಲ್ಲಿ ಬಡವ ಮಾದ ಹೇಗೆ ಶೋಷಿತನಾಗುತ್ತಾನೆನ್ನುವದನ್ನು ತೋರಿಸಲಾಗಿದೆ. ದಾರಿದ್ರ್ಯದ ತೀವ್ರತೆಯನ್ನು ಕೃಷ್ಣಶರ್ಮರು ಹೀಗೆ ವಿವರಿಸಿದ್ದಾರೆ. "ಆತನು ತೊಟ್ಟುಕೊಂಡಿದ್ದ ಅಂಗಿ ಆತನದಲ್ಲ, ಅವನ ತಂದೆಯದು. ಬೆನ್ನ ಕಡೆಯ ಭಾಗವೆಲ್ಲ ಹರಿದುಹೋಗಿದ್ದಿತು. ಮುಂಬದಿಯು ಮೀನಿನ ಜಾಳಿಗೆಯಂತಾಗಿದ್ದಿತು. ಬಲಗೈ ತೋಳು ಕಂಕುಳವರೆಗೆ ಸೀಳಿ ಚುಂಗುಚುಂಗಾಗಿ ನೆಲಕ್ಕ ಅಲೆದಾಡುತ್ತಿತ್ತು. ತಲೆಯ ಮೇಲೆ ಯಾರೋ ಬೀಸಾಡಿದ ಟೊಪ್ಪಿಗೆ..." ಇದನ್ನು ಓದುವಾಗ ಆ ಬಡಆಳು ಮಾದನ ಚಿತ್ರ ಎದುರಿಗೆ ಬಂದುನಿಂತಂತಾಗುತ್ತದೆ. ತಿನ್ನಲಿಕ್ಕೆ ಏನು ಮಾಡೋಣ ಎನ್ನುವದು ಬಡವರ ಚಿಂತೆಯಾದರೆ ತಿಂದುದನ್ನು ಹೇಗೆ ಅರಗಿಸಿಕೊಳ್ಳಬೇಕೆನ್ನುವದು ಹಣವಂತರ ಚಿಂತೆಯೆಂಬುದನ್ನು ಈ ಕಥೆಯಿಂದ ಕಂಡುಕೊಳ್ಳಬಹುದು. 'ಬಹಿಷ್ಕಾರ' ಕಥೆಯಲ್ಲಿ ಒಂದು ಬ್ರಾಹ್ಮಣ ಕುಟುಂಬದಲ್ಲಿ ಪ್ಲೇಗು ಕಾಲಿಟ್ಟಾಗ ಉಳಿದ ಬ್ರಾಹ್ಮಣರು ಅವರನ್ನು ಹೇಗೆ ನೋಡಿಕೊಳ್ಳುತ್ತಾರೆ ಎಂಬುದನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಬ್ರಾಹ್ಮಣನಲ್ಲದ ಗೌಡ ಸಹಾಯಕ್ಕೆ ನಿಂತಾಗ ಬ್ರಾಹ್ಮಣರೆಲ್ಲ ಮಠಾಧೀಶರಲ್ಲಿ ಫಿರ್ಯಾದಿ ಹೇಳಿ ಆ ಕುಟುಂಬಕ್ಕೆ ಬಹಿಷ್ಕಾರ ಹಾಕಿಸುತ್ತಾರೆ. ಮಠಕ್ಕೆ ಕಾಣಿಕೆ ಕೊಟ್ಟರೆ ಬಹಿಷ್ಕಾರ ತೆಗೆಯಬಹುದಂತೆ! ಇಲ್ಲಿ ಕೃಷ್ಣಶರ್ಮರು ಈ ಬಹಿಷ್ಕಾರ ಮಾನವನ ತಪ್ಪಿಗಾಗಿ ಅಲ್ಲ, ಅಪರಾಧಕ್ಕಾಗಿ ಅಲ್ಲ, ಆತನ ಬಡತನಕ್ಕಾಗಿ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. 'ಹೊಟ್ಟೆಯ ಹೋರಾಟ' ಕಥೆಯಲ್ಲಿ ಒಂದು ಸೋದರ ಸಂಸಾರ ಬರಗಾಲದ ಬವಣೆಗೆ ತುತ್ತಾದ ಚಿತ್ರಣವಿದೆ. ಈ ಮೂರೂ ಕಥೆಗಳ ಸಾಮಾನ್ಯ ವಸ್ತು ಬಡತನವಾದರೆ ನಾಲ್ಕನೆಯ ಕಥ 'ರಾಜನ ಧರ್ಮ ಸಂಶೋಧನೆ'ಗೆ ಜಾತೀಯತೆ ವಸ್ತುವಾಗಿದೆ. ಹಿಂದೂ ರಾಜ ಮುಸ್ಲಿಂ ತರುಣಿಯಿಂದ ಆಕರ್ಷಿತನಾದುದಕ್ಕೆ ಉಂಟಾಗುವ ಸಮಸ್ಯೆಗಳನ್ನು ಬಿಂಬಿಸುತ್ತದೆ.

೧೯೩೪ ರಲ್ಲಿ ಪ್ರಕಟವಾದ ಎರಡನೆಯ ಕಥಾ ಸಂಗ್ರಹ 'ಸಂಸಾರ ಚಿತ್ರ'ದಲ್ಲಿ ಒಂಬತ್ತು ಕಥೆಗಳಿವೆ.

'ಹೆಣ್ಣಿನ ಕಣ್ಣು' ಕಥೆಗೆ ತ್ರಿಕೋನ ಪ್ರೇಮ, 'ಅನಾಥ ಬಂಧು' ಕಥೆಗೆ ವರದಕ್ಷಿಣೆ ವಸ್ತು. 'ಜೀವದ ಹೂ' ಕತೆಯಲ್ಲಿ ಒಬ್ಬನೇ ಒಬ್ಬ ಮಗ, ಅವನ ಹುಟ್ಟುಹಬ್ಬದ ದಿನ, ಮನೆಯಲ್ಲಿ ಸತ್ಯನಾರಾಯಣ ಪೂಜೆಯ ಸಂಭ್ರಮದಲ್ಲಿ, ತೆಂಗಿನಕಾಯಿ ತರಲು ಅಂಗಡಿಗೆ ಹೋಗುವಾಗ ಅವನ ಮೇಲೆ ಮೋಟಾರು ಹಾಯ್ದ ಪ್ರಸಂಗದ ವರ್ಣನೆಯಿದೆ 'ಮಂಜಿನ ನೀರು' ಸಾಹಿತಿಯೊಬ್ಬನ ಬಡತನ ಕುರಿತಾದದ್ದು. 'ಬಾಡಿ ಬಿದ್ದ ಹೂ' ಕಥೆ ಗಂಡನನ್ನು ಕಳೆದುಕೊಂಡಾಗ ಹುಚ್ಚಿಯಾದ ಮುಗ್ಧ ತರುಣಿಯೊಬ್ಬಳ ಕುರಿತಾದದ್ದು. 'ಆ ಹೆಂಗಸು' ಒಂದು ಕುತೂಹಲಕಾರಿ ಕಥೆ. ಕಥಾನಾಯಕನ ಹೆಂಡತಿ ಕಾಯಿಲೆ ಬಿದ್ದಾಗ ನರ್ಸ್ ಜೊತೆಗೆ ಬರುತ್ತಿದ್ದ ಅವಳ ಗೆಳತಿಯೊಂದಿಗೆ ಕಥಾ ನಾಯಕನ ಸಲಿಗೆ ಎಬ್ಬಿಸಿದ ಸಮಸ್ಯೆ ಆ ಹೆಂಗಸು ಯಾರೆಂದು ಅರಿಯುವ ಕುತೂಹಲದೊಂದಿಗೆ ಮುಕ್ತಾಯವಾಗುತ್ತದೆ. 'ನೀನು ಪುಟ್ಟನ ತಾಯಿ' ಮಗುವಿನ ಮನಸ್ಸನ್ನು ಎಳೆಎಳೆಯಾಗಿ ಚಿತ್ರಿಸುವ ಒಂದ ಮನೋವೈಜ್ಞಾನಿಕ ಕಥೆ. 'ನನ್ನ ಹುಚ್ಚು' ಕಥೆಯಲ್ಲಿ ಒಬ್ಬ ಹೆಣ್ಣುಮಗಳು ತಾನು ಚಿಕ್ಕವಳಿದ್ದಾಗ ಕಂಡ ಇಬ್ಬರ ಆತ್ಮೀಯ ಮುಖಗಳನ್ನು ನೆನಪಿಸಿಕೊಳ್ಳುತ್ತಾಳೆ. ಸಂಸಾರವೆಂದರೆ ಸೂಜಿಗಲ್ಲು' ಕೊನೆಯ ಕಥೆ. ಇದರಲ್ಲಿ ಮದುವೆ ಒಲ್ಲೆ ಎನ್ನುವ ಯುವಕ ಅಕ್ಕನ ಮಗಳನ್ನು ಕಂಡು ಕರಗಿದ ಸ್ಥಿತಿಯ ಚಿತ್ರಣವಿದೆ. 'ಸಂಸಾರ ಚಿತ್ರ' ಕಥಾಸಂಗ್ರಹದ ಒಂಭತ್ತು ಕಥೆಗಳು ಹೀಗೆ ಸಾಮಾಜಿಕ ಸಮಸ್ಯೆಗಳನ್ನು ಕುರಿತು ರಚಿತವಾದ ಕುತೂಹಲಕಾರಿ ಕಥೆಗಳು.

'ನಮ್ಮ ಬದುಕು' ಕಥಾಸಂಗ್ರಹ ೧೯೩೯ರಲ್ಲಿ ಪ್ರಕಟವಾದುದು. ಲೇಖಕರೇ ಹೇಳುವಂತೆ ವರ್ತಮಾನಲೋಕದ ವಾಸ್ತವ ಚಿತ್ರಣವನ್ನು ಈ ಕಥೆಗಳಲ್ಲಿ ಬಿಂಬಿಸಿದ್ದಾರೆ. ಅಂತೆಯೇ ಈ ಸಂಗ್ರಹಕ್ಕೆ 'ನಮ್ಮ ಬದುಕು ಎಂಬ ಶೀರ್ಷಿಕೆ. 'ಮಲ್ಲಮ್ಮ'ನ ಮಹಾಭಾರತ' ಇದರಲ್ಲಿಯ ಮೊದಲ ಕಥೆ. ಮಲ್ಲಮ್ಮ ಒಬ್ಬ ಮುದುಕಿ. ಶಿವಲಿಂಗ ಅವಳ ಮಗ, ಕಾಶಿ ಸೊಸೆ. ಪಕ್ಕದ ಹೊಲದ ರುದ್ರಪ್ಪ ಕಾಶಿಯ ಮೇಲೆ ಕಣ್ಣಿಟ್ಟು ಬಲಾತ್ಕರಿಸುತ್ತಾನೆ. ಅವಳು ಬಾವಿಗೆ ಬಿದ್ದು ಪ್ರಾಣ ಕಳೆದುಕೊಳ್ಳುತ್ತಾಳೆ. ಇದು ಆತ್ಮಹತ್ಯೆಯ ಪ್ರಕರಣ, ಮೂರುನೂರು ರೂಪಾಯಿ ಕೊಟ್ಟರೇನೇ ತಾನು ಸುಮ್ಮನಿರುವುದಾಗಿ ಊರಿನ ಗೌಡ ಹೇಳುತ್ತಾನೆ. ಬರಗಾಲದ ಬವಣೆಯಲ್ಲೂ ಶಿವಲಿಂಗ ಮೂರುನೂರು ಕೊಟ್ಟು ತಾಯಿ ಮಲ್ಲಮ್ಮನನ್ನು ಕರೆದುಕೊಂಡು ದೇಶಾಂತರ ಹೋಗುತ್ತಾನೆ. ಗ್ರಾಮಾಂತರ ಜೀವನದಲ್ಲಿಯ ಕಾಮ-ಪ್ರೇಮ ದುರಂತ, ಬರಗಾಲದ ಬವಣೆ, ಬಡತನದ ಉಗ್ರತೆಗಳನ್ನು ಇಲ್ಲಿ ಕೃಷ್ಣಶರ್ಮರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. 'ಸೋಂಕು ರೋಗ' ಕಥೆಯಲ್ಲಿ ಕಾಯಿಲೆ ಹೆಂಡತಿಯಿಂದ ಸುಖ ಕಾಣದ ಮೋಹನರಾಯ, ವೈರಾಗ್ಯದ ವೇಷಹಾಕಿ ಕಾಮತೃಪ್ತಿಗಾಗಿ ಅಂಗನೆಯರ ಸಂಗ ಮಾಡುತ್ತಾನೆ. ಹೆಂಡತಿ ಸತ್ತ ಮೇಲಂತೂ ಈ ವೈರಾಗ್ಯದ ರೋಗ ಅಧಿಕಗೊಳ್ಳುತ್ತದೆ ! ಆಧುನಿಕ ಯುವತಿಯೊಬ್ಬಳನ್ನು ಕಂಡು ಮೋಹಕ್ಕೊಳಗಾಗಿ ವೈರಾಗ್ಯ ಬಿಟ್ಟು ಸಂಸಾರಿಯಾಗುತ್ತಾನೆ. 'ಕಾಣದ ಕೈ' ಕಥೆ ತನ್ನ ಹೆಂಡತಿಯ ಅನೈತಿಕ ಸಂಬಂಧದ ಸಂಶಯಕ್ಕೆ ಸಿಕ್ಕ ರೈತ ಚೆನ್ನಪ್ಪ ಅನುಭವಿಸುವ ಮಾನಸಿಕ ಯಾತನೆಯನ್ನು ಚಿತ್ರಿಸುತ್ತದೆ. 'ಮಮತೆಯ ಮುಡಿಪು' ಕಥೆಯಲ್ಲಿ ಇಂಗ್ಲೀಷರು ನಮ್ಮನ್ನಾಳುತ್ತಿದ್ದ ಸಮಯದಲ್ಲಿ ನಮ್ಮ ಜನರೇ ಅಧಿಕಾರ ಲಾಲಸೆಗೊಳಗಾಗಿ ಹೇಗೆ ದೇಶದ್ರೋಹಿಗಳಾದರು ಎಂಬುದನ್ನು ಚಿತ್ರಿಸಲಾಗಿದೆ. 'ಮಾಲ್ಕೀ ಹಕ್ಕು' ರೈತರ ಶೋಷಣೆಯನ್ನು ಪ್ರತಿಬಿಂಬಿಸುವ ಕಥೆ, ಬಟ್ಟೆಯ ಗಿರಣಿಗಳು ಹೊಸದಾಗಿ ಬಂದಾಗ ಕೈಮಗ್ಗದ, ಜಾಣಪ್ಪ, ಅನುಭವಿಸುವ ನಿರುದ್ಯೋಗದ ಸಮಸ್ಯೆಯ ವಿಶ್ಲೇಷಣೆ 'ಜಾಡರ ಜಾಣಪ್ಪ' ಕಥೆಯಲ್ಲಿದೆ. ಸುಂದರ ನಿರೂಪಣೆಯಿಂದಾಗಿ ಇಲ್ಲಿಯ ಕಥೆಗಳು ಆತ್ಮೀಯವಾಗುತ್ತವೆ.

'ಪುರಾತನಾದುವ ಕಲ್ಲು' ವೈಶಿಷ್ಟ್ಯಮಯವಾದ ಎಂಟು ಕಥೆಗಳ ಸಂಕಲನ, ೧೯೪೯ರಲ್ಲಿ ಪ್ರಕಟವಾದುದು. ಇಲ್ಲಿಯ ಕಥೆಗಳ ಕುರಿತು ಲೇಖಕರು ಹೀಗೆ ಹೇಳಿದ್ದಾರೆ. "ನಾನು ಕನ್ನಡ ಜಾನಪದ ಜೀವನ ಸಂಸ್ಕೃತಿಯ ಅಭ್ಯಾಸಿ. ಅದರ ಅರಿಕೆಯಾಗುತ್ತ ಹೋದಂತೆಲ್ಲ ನಮ್ಮ ನಾಡಿಗರು ಮಾನವ ಜೀವನ ರಹಸ್ಯವನ್ನು ಎಷ್ಟೊಂದು ಸೂಕ್ಷ್ಮ ರೀತಿಯಿಂದ ಅರಿತುಕೊಂಡಿರುವರೆಂಬುದನ್ನು ಮನಗಂಡು ಅಚ್ಚರಿಪಟ್ಟೆ, ಹೆಮ್ಮೆಯನ್ನು ತಾಳಿದೆ, ಹಿಗ್ಗಿ ನಲಿದಾಡಿದೆ.

ಅವರ ವ್ಯಕ್ತಿತ್ವದ ನಿಷ್ಠೆ, ಸಾಮಾಜಿಕ ಪ್ರಜ್ಞೆ—ಇವುಗಳ ಸಾಕ್ಷಾತ್ಕಾರ ಮತ್ತೆ ಮತ್ತೆ ನನ್ನ ಅಂತರಂಗವನ್ನು ಜುಮ್ಮುದಟ್ಟಿಸುತ್ತಿತ್ತು. ಕನ್ನಡ ಜಾನಪದ ಜೀವನ ಪರಂಪರೆಯಲ್ಲಿ ನಾನು ಕಂಡಿರುವ ಸಾಂಸ್ಕೃತಿಕ ಕಥಾ ವಸ್ತುಗಳು ಅನೇಕ. ಹೇಗಾದರೂ ಮಾಡಿ ಆ ವಸ್ತುಗಳನ್ನು ಇಂದಿನ ಕನ್ನಡಿಗರ ಮನದ ಮುಂದೆ ಇರಿಸಬೇಕೆಂಬ ಹಾರಯಿಕೆ ನನ್ನ ಭಾವನೆಗಳನ್ನು ಕುಣಿಸುತ್ತಲಿದ್ದಿತು. ಇಂದಿಗೆ ೨೪–೨೫ ವರ್ಷಗಳ ಹಿಂದೆ ಮುಂಬಯಿ ಆಕಾಶವಾಣಿಯು ನನ್ನ ಆ ಹಾರಯಿಕೆ ಪ್ರತ್ಯಕ್ಷ ಕಾರ್ಯ ಮಾಡುವಂತೆ ಅವಕಾಶವನ್ನು ಕಲ್ಪಿಸಿಕೊಟ್ಟು ಈ ಕಥೆಗಳು ಒಂದೊಂದಾಗಿ ಬೆಳಕಿಗೆ ಬರುವಂತೆ ಉಪಕಾರ ಮಾಡಿತು." ಅಂತೆಯೇ ಇದರೊಳಗಿನ ಆರು ಕಥೆಗಳಲ್ಲಿ ನಮ್ಮ ಪ್ರಾಚೀನ ಜನರ ಜೀವನವನ್ನು ಅವರು ನಂಬಿಕೊಂಡ ಮೌಲ್ಯಗಳನ್ನು, ಸಾಂಸ್ಕೃತಿಕ ಪರಂಪರೆಯನ್ನು ಚಿತ್ರಿಸುತ್ತವೆ. ಮೊದಲನೆಯ ಕಥೆಯೇ 'ಮಾತನಾಡುವ ಕಲ್ಲು.' ಚೊಚ್ಚಿಲು ಬಸಿರು ಗೌರಿಗೆ ಮೇವು ಹೊರಿಸಲು ಬಂದ ಹೊಲೆಯರ ಹನುಮಪ್ಪ 'ಹೆಣ್ಣು ಹುಟ್ಟಿದರೆ ತನ್ನ ಮೊಮ್ಮಗನಿಗೇ ಕೊಡಬೇಕು' ಎಂದು ಹೇಳಿದ್ದಕ್ಕೆ ಇದೊಂದು ಚೇಷ್ಟೆ ಎಂದು ತಿಳಿದ ಗೌರಿ ಒಪ್ಪುತ್ತಾಳೆ. ಹೆಣ್ಣೆ ಹುಟ್ಟುತ್ತದೆ. ಹನುಮಪ್ಪ ಹಟ ಹಿಡಿಯುತ್ತಾನೆ, ಗೌರಿ ಪಂಚಾಯತಿಯ ಮುಂದೆ ತಾನು ಹಾಗೆ ಮಾತು ಕೊಟ್ಟಿಲ್ಲವೆಂದು ಸುಳ್ಳು ಹೇಳುತ್ತಾಳೆ. ಹನುಮಪ್ಪ ಗುಡ್ಡದ ಮೇಲಿನ ಕಲ್ಲು ತೋರಿಸಿ ಅದೇ ಸಾಕ್ಷಿ ಹೇಳುತ್ತದೆ—ಎಂದು ಹೇಳಿ ಕಲ್ಲಿಗೆ ವಿನಂತಿಸಿಕೊಂಡಾಗ ಆ ಕಲ್ಲೇ ಉರುಳಿ ಬಂದು ಸಾಕ್ಷಿ ನುಡಿಯಿತಂತೆ! ಇದೊಂದು ನೀತಿ ಕಥೆ. ಪ್ರಾಚೀನ ಕಾಲದ ಹಳ್ಳಿಯ ಕೌಟುಂಬಿಕ ಚಿತ್ರಣದೊಂದಿಗೆ ಅವರ ರೀತಿ–ನೀತಿ, ಮುಗ್ಧ ಸ್ವಭಾವಗಳನ್ನು ಚಿತ್ರಿಸುವ ಸ್ಥಳ ಪುರಾಣದ ಆಕರ್ಷಕ ನಿರೂಪಣೆ ಇದರಲ್ಲಿದೆ. ಇದೇ ರೀತಿಯಲ್ಲಿ ಹೆಣೆದ ಕಥೆಗಳು 'ಸೀಮೆಯ ಕಲ್ಲು.' 'ಜೋಗತಿ ಕಲ್ಲು' 'ಕಂಕಣದ ಕೈ' 'ಬಡವಿಯ ಬಾವಿ,'ಹಾಗೂ 'ವೀರಮಾನ್ಯ' ಸ್ಥಳ ಪುರಾಣಗಳ ಮಹಿಮೆ ಸಾರುವ ಕಥೆಗಳಿವೆ. 'ಇಬ್ಬಂದ ನಿಬ್ಬಣ' ಕಥೆಯಲ್ಲಿ ಹಳ್ಳಿಯ ಎರಡು ಪ್ರತಿಷ್ಠಿತ ಗೌಡರ ಮನೆತನಗಳ ನಡುವಿನ ದ್ವೇಷ ಕೊಲೆಗಳಲ್ಲಿ ರೂಪಾಂತರವಾಗುವ ವಸ್ತುವಿದೆ. ಕಾರಹುಣ್ಣಿಮೆಯಲ್ಲಿ ಕರಿಹರಿಯುವ ಸಮಯದಲ್ಲಿ ಕೆಳಗಿನ ಓಣಿಯ ಗೌಡರ ಎತ್ತು ಗೆದ್ದದ್ದೇ ದ್ವೇಷಕ್ಕೆಮೂಲವಾಗಿತ್ತು. ಇಂಥ ಚಿಕ್ಕ ವಿಷಯವೇ ಬೆಳೆದು ದುರಂತಕ್ಕೆ ನಾಂದಿ ಹಾಡಿದುದರ ಧ್ವನಿ ಈ ಕಥೆಯಲ್ಲಿದೆ. 'ದನಗಾಹಿ' ಹಳ್ಳಿಯ ಮುಗ್ಧ ತರುಣನ ಕಥೆ. ಕೊಲೆಯನ್ನು ಕಣ್ಣಾರೆ ಕಂಡಿದ್ದರೂ ಸತ್ಯವನ್ನು ಹೇಳಲಾಗದೆ ಬೇಸರಪಟ್ಟು ಊರನ್ನೇ ಬಿಟ್ಟು ಹೋಗುತ್ತಾನೆ. ಸತ್ಯ ಪ್ರಾಮಾಣಿಕತೆಗಳಿಗೆ ಮುಗ್ಧ ಹಳ್ಳಿಗರು ಕೊಡುವ ಬೆಲೆಯನ್ನು ಈ ಕಥೆ ನಿರೂಪಿಸುತ್ತದೆ.

೧೯೫೫ ರಲ್ಲಿ ಪ್ರಕಟವಾದ 'ಜನಪದ ಜೀವನ' ಏಳು ಕಥೆಗಳ ಸಂಗ್ರಹ. 'ಅರಳಿದ ಜೀವ'ದಲ್ಲಿ ಬರಗಾಲದ ತೀವ್ರತೆಯನ್ನು, 'ಹುಳ ಹತ್ತಿದ ಹಳ್ಳಿ,' 'ದೆವ್ವದ ಸಂಸಾರ' ಸ್ವಾತಂತ್ರ್ಯೋತ್ತರ ಭಾರತದ ಗ್ರಾಮೀಣ ಬದುಕನ್ನು ಚಿತ್ರಿಸುತ್ತವೆ. ಒಡತಿಯ ರಕ್ಷಣೆಗಾಗಿ ಹೋರಾಡಿ ಸತ್ತ ಮುತ್ತಣ್ಣನ ಮನೆತನಕ್ಕೆ ನೀಡಿದ ಕೊಡುಗೆಯೇ 'ನೆತ್ತರ ಕೊಡುಗೆ!'. 'ಮೂರನೆಯ ದರ್ಜೆಯ ಪ್ರಯಾಣ' ಜನಸಾಮಾನ್ಯರ ಪ್ರಯಾಣದ ಹಲವಾರು ಅನುಭವಗಳನ್ನು ವಿವರಿಸುತ್ತದೆ. ಮಾತಿಗಿಂತ ಮಾನವೀಯತೆ ಮುಖ್ಯವೆಂಬ ನೀತಿಯನ್ನು ಈ ಕಥೆ ಹೇಳುತ್ತದೆ. 'ಬೀದಿಯ ಹಾಡುಗಾರರು' ಕಲೆ ಹಾಗೂ ಬದುಕುಗಳಲ್ಲಿರುವ ವಿರೋಧಾಭಾಸವನ್ನು ಎತ್ತಿ ತೋರಿಸುತ್ತದೆ. 'ನಂದನೂರಿನ ಜಾತ್ರೆ' ಯಲ್ಲಿ ಜಾತ್ರೆಯ ವರ್ಣನೆಯೊಡನೆ ಗಂಗಾಸಾನಿಯ ಆಟ ನೋಡಿದ ಶ್ರೀಮಂತ ದೇಸಾಯಿ ಅವಳನ್ನು ತನ್ನವಳನ್ನಾಗಿಸಿಕೊಳ್ಳಲು ಪ್ರಯತ್ನಿಸಿದ ಚಿತ್ರಣವಿದೆ, ಆದರೆ ಕಲಾನಿಷ್ಠೆ ಗಂಗಾಸಾನಿ ಕಲೆಯೇ ತನ್ನ ಸರ್ವಸ್ವವೆಂದು ಹೇಳಿ ಒಡೆದು ಹೋಗಿದ್ದ ದೇಸಾಯಿ ಮನೆತನವನ್ನು ಒಂದುಗೂಡಿಸುತ್ತಾಳೆ. ಕಲಾನಿಷ್ಠೆಯಾದ ಗಂಗಾಸಾನಿಯ ಉದಾತ್ತ ಪಾತ್ರ ಓದುಗರಿಗೆ ಮೆಚ್ಚುಗೆಯಾಗುತ್ತದೆ.

೧೯೬೯ ರಲ್ಲಿ ಪ್ರಕಟವಾದ 'ಕಳ್ಳರ ಗುರು ಮತ್ತು ಇತರ ಕಥೆಗಳು' ಕಥಾ ಸಂಗ್ರಹ ಪ್ರಕಟವಾಯಿತು. 'ಕಳ್ಳರ ಗುರು' ಈ ಸಂಗ್ರಹದ ಮೊದಲ ಕಥೆ. ಎಂತಹ ದುಷ್ಟರಲ್ಲಿಯೂ ಕೂಡ ಮಾನವೀಯತೆಯೊಂದು ಇದ್ದೇ ಇರುತ್ತದೆಯೆಂಬುದನ್ನು ತೋರಿಸುವ ಉತ್ಕೃಷ್ಟ

ಕಥೆ; 'ಐದು ಸಾವಿರದ ಬಹುಮಾನ', ರೋಮ್ಯಾಂಟಿಕ್ ಪೇಶಂಟ್; 'ಬೆಳಗಿನ ಕೋಳಿ', ಬೀರಣ್ಣನ ದರ್ಶನ,' 'ಸ್ವಾತಂತ್ರ್ಯ ಮಹೋತ್ಸವ', 'ಬೋನಗಿತ್ತಿಯ ಹಬ್ಬ' ಇವು ಇತರ ಕಥೆಗಳು. ಸ್ವಾತಂತ್ರ್ಯ ಹೋರಾಟಗಾರನೊಬ್ಬ ತಲೆಮರೆಸಿಕೊಂಡಾಗ ಸರಕಾರ ಘೋಷಿಸುವ ಹಣ ಐದು ಸಾವಿರ ರೂಪಾಯಿ. ಸ್ವಾಂತತ್ರ್ಯ ಹೋರಾಟಗಾರನ ಜೀವನ, ಜನತೆಯ ದೃಷ್ಟಿ, ಸಹಕಾರ, ಸರಕಾರದ ಕ್ರೂರತೆ 'ಐದು ಸಾವಿರದ ಬಹುಮಾನ' ಕಥೆಯಲ್ಲಿ ಚಿತ್ರಿತವಾಗಿದೆ. 'ರೋಮ್ಯಾಂಟಿಕ್ ಪೇಶಂಟ್'ದಲ್ಲಿ ಮನುಷ್ಯನಲ್ಲಿ ಹುದುಗಿದ ರಾಕ್ಷಸೀ ಹಾಗೂ ಮಾನವೀಯ ಭಾವನೆಗಳ ನಿರೂಪಣೆಯಿದೆ. 'ಬೆಳಗಿನ ಕೋಳಿ' ಕಥೆಯಲ್ಲಿ ತಾನು ಪ್ರೇಮಿಸಿದವನನ್ನು ವಿವಾಹವಾದರೂ ವಿವಾಹದ ನಂತರ ಅವನು ದಾಂಪತ್ಯ ಜೀವನದಲ್ಲಿ ಆಸಕ್ತಿ ತೋರಿಸದಾಗ ಅವನಿಂದ ಬೇಸರ ಪಟ್ಟು, ತಳಮಳಿಸಿ ಕೊನೆಗೆ ಬೆಳಗಿನ ಕೋಳಿ ಕೂಗುವ ಹೊತ್ತಿಗೆ ಮನೆಬಿಟ್ಟು ಹೋಗುವ ಹೃದಯಂಗಮ ಸನ್ನಿವೇಶದ ಚಿತ್ರಣವಿದೆ, 'ಬೀರಣ್ಣನ ದರ್ಶನ' ಕಥೆ ದುಡಿಯುವವನೇ ಹೊಲದೊಡೆಯ ಎಂಬ ಕಾನೂನಿನ ಪ್ರಾಯೋಗಿಕತೆಯನ್ನು ವಿಶ್ಲೇಷಿಸುವ ಕಥೆ. ಕಾನೂನಿನಂತೆ ಹೊಲ ತಮ್ಮದೇ ಎಂದು ವಾದಿಸುವ ಮಗ, 'ಸರಕಾರ ಏನರ ಕಾಯದೆ ಮಾಡಿದರೂ ನಾವು ದೇವರ ಕಾಯದೆ ಪ್ರಕಾರ ನಡೀಬೇಕೋ ನನ ಮಗನ' ಎನ್ನುವ ತಂದೆ ಇವರಲ್ಲಿಯ ಮೌಲಿಕ ಘರ್ಷಣೆಗಳನ್ನು ಈ ಕಥೆ ವಿವರಿಸುತ್ತದೆ. 'ಸ್ವಾತಂತ್ರ್ಯ ಮಹೋತ್ಸವ' ಭ್ರಷ್ಟ ರಾಜಕಾರಣಿಗಳ ಕುರಿತದ್ದು 'ಬೋನಗಿತ್ತಿಯ ಹಬ್ಬ' ದೇಸಾಯಿಮನೆತನ ಆಚರಿಸುವ ಒಂದು ಹಬ್ಬ. ದೇಸಾಯರ ಮಗಳನ್ನು ಬೇರೆ ಊರಿನ ಪುಂಡನೊಬ್ಬ ಹಾರಿಸಿಕೊಂಡು ಹೋದಾಗ ಬೋನಗಿತ್ತಿ ಭೋಗಮ್ಮ ಅವಳನ್ನು ಪಾರುಮಾಡಿ ತಾನು ಬಲಿಯಾಗುತ್ತಾಳೆ. ಅವಳ ನೆನಪಿಗಾಗಿ ದೇಸಾಯರ ಮನೆತನದವರು ಬೋನಗಿತ್ತಿಯ ಹಬ್ಬವನ್ನು ಆಚರಿಸತೊಡಗಿದ್ದಾರೆನ್ನುವ ಸಂಪ್ರದಾಯವನ್ನು ಹೇಳುವ ಕಥೆಯಿದು.

ಕೃಷ್ಣಶರ್ಮರ ಕಥೆಗಳು ಆಯಾ ಕಾಲಕ್ಕನುಗುಣವಾಗಿ ಸಮರ್ಪಕವಾಗಿ ಮೂಡಿ ನಿಂತಿವೆ. ಕಥೆಗಳನ್ನು ಓದುವಾಗ ಸನ್ನಿವೇಶಗಳು ಕಣ್ಮುಂದೆಯೇ ನಡೆಯುತ್ತಿವೆಯೇನೋ ಎಂದು ಅನಿಸುತ್ತದೆ. ಸಂಪ್ರದಾಯ ರೀತಿ ನೀತಿಗಳ ಚೌಕಟ್ಟಿನಲ್ಲಿ ಹೆಣೆಯಲಾದ ಈ ಕತೆಗಳಲ್ಲಿ ಮಾನವೀಯ ಗುಣಗಳಿಗೇ ಪ್ರಾಧಾನ್ಯತೆ. ಜೀವನವನ್ನು ತಿದ್ದಿಕೊಳ್ಳಬೇಕಾದವನ ಮುಂದೆ ಆದರ್ಶ ಸೌಂದರ್ಯಗಳ ಚಿತ್ರಗಳಿರಬೇಕಲ್ಲದೆ ವಾಸ್ತವ ವಿಕಾರಗಳ ಪ್ರತಿಬಿಂಬಗಳಿರಬಾರದೆಂಬ ಅವರ ನಿಲುವನ್ನು ಇಲ್ಲಿಯ ಕಥೆಗಳು ದೃಢಪಡಿಸುತ್ತವೆ.

**ಕಾದಂಬರಿಗಳು :**

೧೯೩೩ರಿಂದ ೧೯೭೧ರವರೆಗೆ ಕೃಷ್ಣಶರ್ಮರ ಐದು ಕಾದಂಬರಿಗಳು ಪ್ರಕಟವಾಗಿವೆ. ಇವುಗಳಲ್ಲಿ 'ಸುಂದರ್ಶನ' ಮತ್ತು 'ಮಂಗಳ ಮಂದಿರ' ಸಾಮಾಜಿಕ ಕಾದಂಬರಿಗಳು, 'ರಾಜಯೋಗಿ', 'ಅಶಾಂತಿ ಪರ್ವ', 'ಮಲ್ಲಿಕಾರ್ಜುನ' ಐತಿಹಾಸಿಕ ಕಾದಂಬರಿಗಳು.

ಕನ್ನಡ ಕಾದಂಬರಿ ಪ್ರಕಾರ ಇನ್ನೂ ಬಾಲ್ಯಾವಸ್ಥೆಯಲ್ಲಿದ್ದಾಗ ಕೃಷ್ಣಶರ್ಮರು ಬರೆದ ಪ್ರಥಮ ಕಾದಂಬರಿ 'ಸುಂದರ್ಶನ' ೧೯೩೩ರಲ್ಲಿ ಪ್ರಕಟವಾಯಿತು. ಇದುವರೆಗೆ ಈ ಕಾದಂಬರಿ ಐದು ಮುದ್ರಣಗಳನ್ನು ಕಂಡಿದೆ. ಕಾದಂಬರಿಯಲ್ಲಿಯ ಪ್ರಮುಖ ಪಾತ್ರ ಸುದರ್ಶನ. ಇದೇ ಹೆಸರೂ ಕಾದಂಬರಿಗಿಟ್ಟಿದ್ದಾರೆ. ಒಮ್ಮುಖ ಪ್ರೇಮದ ದುರಂತಗಳನ್ನು ಪ್ರೇಮ-ಮೋಹಗಳಲ್ಲಿಯ ವ್ಯತ್ಯಾಸವನ್ನು ಚಿತ್ರಿಸುವದೇ ಈ ಕಾದಂಬರಿಯ ಉದ್ದೇಶ. ಸುದರ್ಶನ, ಉಷಾ, ಗಿರಿಧರ, ಪ್ರಭಾ ಒಂದೇ ಮನೆಯಲ್ಲಿದ್ದು ಬೆಳೆದವರು. ಪ್ರಭಾಳಿಗೆ ಗಿರಿಧರ ಇಷ್ಟ, ಗಿರಿಧರನಿಗೆ ಉಷಾ ಇಷ್ಟ, ಉಷಾಳಿಗೆ ಸುಂದರ್ಶನ ಇಷ್ಟ. ಸುಂದರ್ಶನ ನಾಯಕನಾಗಿ ಗಿರಿಧರ ಖಳನಾಯಕನಾಗಿ ಇಲ್ಲಿ ಗೋಚರಿಸುತ್ತಾರೆ. ತಾನು ಇಷ್ಟಪಟ್ಟ ಉಷಾಳನ್ನೇ ಮದುವೆಯಾಗಲು ರೀತಿನೀತಿಗಳನ್ನು ಅಲಕ್ಷಿಸಿ ಗಿರಿಧರ ಪ್ರಯತ್ನಿಸುತ್ತಾನೆ. ಅವನ ವರ್ತನೆಯಿಂದ ಬೇಸರಗೊಂಡ ಸುದರ್ಶನ ಮನೆಯನ್ನೇ ಬಿಟ್ಟು ಹೋಗಿ 'ದೀನಾನಂದ' ಎಂಬ ಹೆಸರನ್ನಿಟ್ಟುಕೊಂಡು ಸಮಾಜ ಸೇವೆಯಲ್ಲಿ ನಿರತನಾಗುತ್ತಾನೆ. ಗಿರಿಧರ ಎಷ್ಟು ಪ್ರಯತ್ನಿಸಿದರೂ ಉಷಾಳ ಮನಸ್ಸು

ಬದಲಿಸುವದಿಲ್ಲ. ಕೊನೆಗೆ ಪ್ರಭಾಳನ್ನೇ ಮದುವೆಯಾಗುವದೆಂದು ಗಿರಿಧರ ತೀರ್ಮಾನಿಸಿದರೂ ಮದುವೆಯ ಮಂಟಪದಲ್ಲಿ ಬಂದ ನೃತ್ಯಗಾರ್ತಿಯಲ್ಲಿ ಮೊಹಗೊಳ್ಳುತ್ತಾನೆ. ಆಕಸ್ಮಿಕವಾಗಿ ದೀನಾನಂದ (ಸುದರ್ಶನ) ಉಷಾಳನ್ನು ಭೆಟ್ಟಿಯಾದರೂ ಅವಳನ್ನು ಮದುವೆಯಾಗಲು ಆತ ಒಪ್ಪುವದಿಲ್ಲ. ಪ್ರೇಮಕ್ಕಿಂತ ತ್ಯಾಗವೇ ಮಹತ್ವದ್ದೆನಿಸಿ, ಸಮಾಜಸೇವೆಯೇ ಏಕೈಕ ಗುರಿಯೆನ್ನುತ್ತಾನೆ. ಹೀಗಾಗಿ ಯಾರಪ್ರೇಮವೂ ಇಲ್ಲಿ ಫಲಿಸುವದಿಲ್ಲ; ಸುದರ್ಶನನ ಪಾತ್ರದ ಬೆಳವಣಿಗೆ ಇಲ್ಲಿ ಓದುಗರನ್ನು ಸೆಳೆದುಕೊಂಡು ಹೋಗುತ್ತದೆ. ಒಂದು ನಿಶ್ಚಿತ ಘಟ್ಟ ಮುಟ್ಟಿದ ಮೇಲೆ ಆತನಿಗೆ ಪ್ರೇಮಜೀವನದಲ್ಲಿ ವಿರಕ್ತಿ ಹುಟ್ಟಿ ತ್ಯಾಗಮಯ ಜೀವನಕ್ಕೆ ಬದ್ಧನಾಗಿರುವದು ಅವನ ಆದರ್ಶವನ್ನು ಸೂಚಿಸುತ್ತದೆಯೇ ಹೊರತು ಅಸಹಜತೆಯನ್ನೇನೂ ಬಿಂಬಿಸುವದಿಲ್ಲ. ಹೀಗಾಗಿ ಓದುಗರಿಗೆ ಕೊನೆಯವರೆಗೂ ಆತ ಆತ್ಮೀಯನಾಗಿಯೇ ಉಳಿದು ಬಿಡುತ್ತಾನೆ.

'ಮಗಳ ಮದುವೆ' ೧೯೫೫ ರಲ್ಲಿ ಪ್ರಕಟವಾದ ಇನ್ನೊಂದು ಸಾಮಾಜಿಕ ಕಾದಂಬರಿ. ಮುಂಬಯಿ ಸರಕಾರದಿಂದ ಆಗ ಎರಡುಸಾವಿರ ರೂಪಾಯಿಗಳ ಪ್ರಥಮ ಬಹುಮಾನ ಪಡೆಯಿತು. ೧೯೩೦ ರ ರಾಜಕೀಯ ಚಳುವಳಿಯನ್ನು ಹಿನ್ನೆಲೆಯಾಗಿರಿಸಿಕೊಂಡು ರಚಿತವಾದ ಕೃತಿಯಿದು. ಉತ್ತರ ಕರ್ನಾಟಕದ ಆಗಿನ ಜನಜೀವನದ ವಿವಿಧ ಮಾದರಿಗಳನ್ನು ಇದರಲ್ಲಿ ಚಿತ್ರಿಸಲಾಗಿದೆ. ಕಾದಂಬರಿಯ ಮುನ್ನುಡಿಯಲ್ಲಿ "...ಕಥಾ ಪಾತ್ರಗಳ ಅಂತಃಸ್ವರೂಪದ ವಾಸ್ತವ ಚಿತ್ರಣವನ್ನೇ ಕಾದಂಬರಿಯ ವೈಶಿಷ್ಟ್ಯವನ್ನಾಗಿ ಮಾಡಿತೋರಿಸಬೇಕೆಂಬುದು ನನ್ನಗುರಿ ..."ಎಂದು ಕೃಷ್ಣಶರ್ಮರೇ ಹೇಳಿದ್ದಾರೆ. ಕಾದಂಬರಿಯ ವಸ್ತು ಹೀಗಿದೆ. ಕಾವೇರಿ ಗೋಪಾಲರಾಯರ ಮಗಳು. ಎಷ್ಟೋ ವರಗಳು ಬಂದರೂ ಆಕೆ ವಧುಪರೀಕ್ಷೆಯಲ್ಲಿ ತೇರ್ಗಡೆಯಾಗುವದಿಲ್ಲ. ಕಾವೇರಿಯನ್ನು ನೋಡಲು ಬಂದ ವೆಂಕಣ್ಣನೆಂಬ ತರುಣ ಹತ್ತೊಂಬತ್ತನೆಯವನು. ಕಾವೇರಿ ಇಂಗ್ಲೀಷ ಕಲಿತಿಲ್ಲವೆಂಬುದೊಂದೇ ದೊಡ್ಡ ಕುಂದು ! ಪಾಶ್ಚಾತ್ಯ ಸಂಸ್ಕೃತಿಯ ಪ್ರತೀಕನಾದ ವೆಂಕಣ್ಣನಿಗೆ ಕಾವೇರಿಯ ರೂಪ, ಗುಣ, ನಡತೆ, ಯಾವುದೂ ಪ್ರಾಮುಖ್ಯವೆನಿಸುವದಿಲ್ಲ. ವಧು ಪರೀಕ್ಷೆಯ ಸಂದರ್ಭದಲ್ಲಿ ಚಹಾ ಕೊಡಲು ಬಂದ ಕುಮುದಾಳನ್ನು ವೆಂಕಣ್ಣ ಮೆಚ್ಚುತ್ತಾನೆ. ಆದರೆ ಕುಮುದಾಳಿಗೆ ವೆಂಕಣ್ಣನ ಮೇಲೆ ಮನಸ್ಸಿಲ್ಲ. ರತ್ನಾಕರ ವೆಂಕಣ್ಣನ ಸ್ನೇಹಿತ. ವಧುಪರೀಕ್ಷೆಯ ಈ ಸಂದರ್ಭದಲ್ಲಿ ವೆಂಕಣ್ಣನೊಂದಿಗೆ ಬಂದಿರುತ್ತಾನೆ. ಕುಮುದಾ ಚಹಾ ಕೊಡುತ್ತಿರುವಾಗ ಕೈತಪ್ಪಿ ಸಿರೇಗಿ ಕಪ್ಪು ರತ್ನಾಕರನ ಕಾಲ ಮೇಲೆ ಬೀಳುತ್ತದೆ. ಥಟ್ಟನೆ ತನ್ನ ಸೊಂಟದಲ್ಲಿ ಸಿಕ್ಕಿಸಿಕೊಂಡ ಕರವಸ್ತ್ರವನ್ನು ಹೊರತೆಗೆದು ರತ್ನಾಕರನಿಗೆ ಕೊಟ್ಟು ಹೋಗಿಬಿಡುತ್ತಾಳೆ. ಕರವಸ್ತ್ರ ರತ್ನಾಕರನಲ್ಲೇ ಉಳಿಯುತ್ತದೆ. ರತ್ನಾಕರ ದೇಶಾಭಿಮಾನಿ, ಹಲವಾರು ಆದರ್ಶಗಳನ್ನು ಹೊಂದಿ ಹೊಂಗನಸು ಕಾಣುವ ಯುವಕ. ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸುವವ. ಕುಮುದಾ ಅವನ ಹೋರಾಟವನ್ನು ಮೆಚ್ಚಿ ಅವನನ್ನೇ ಪ್ರೇಮಿಸತೊಡಗುತ್ತಾಳೆ. ವೆಂಕಣ್ಣನಿಂದ ಕಾವೇರಿ ತಿರಸ್ಕೃತಳಾದರೂ ವೆಂಕಣ್ಣನ ಅಣ್ಣ ರಂಗಣ್ಣ ಕಾವೇರಿಯನ್ನು ಮೆಚ್ಚಿ ಮದುವೆಯಾಗುತ್ತಾನೆ. ಆದರೆ ಕುಮುದಾ ಹಾಗು ರತ್ನಾಕರರ ಮದುವೆ ನೆರವೇರುವದೇ ಇಲ್ಲ. ಸ್ವಾತಂತ್ರ್ಯ ಚಳುವಳಿಯಲ್ಲಿ ಹೋರಾಡಿದ ರತ್ನಾಕರ ಸೆರೆಮನೆ ಸೇರುತ್ತಾನೆ. ಒಂದು ಹೆಣ್ಣಿನ ಮದುವೆಯಾಗಬೇಕಾದರೆ ಎಷ್ಟೊಂದು ಸಮಸ್ಯೆಗಳು ಅಡ್ಡ ಬರುತ್ತವೆ. ಎಷ್ಟೊಂದು ವ್ಯಕ್ತಿಗಳು ಯಾವ ಯಾವ ರೀತಿಯಲ್ಲಿ ಯಾವ ಯಾವ ದೃಷ್ಟಿಕೋನಗಳಿಂದ ಪ್ರತಿಕ್ರಿಯಿಸುತ್ತಾರೆ ಎಂಬುದನ್ನು ಕೃಷ್ಣಶರ್ಮರು ಪರಿಣಾಮಕಾರಿಯಾಗಿ ಇಲ್ಲಿ ಚಿತ್ರಿಸಿದ್ದಾರೆ. ಸ್ವಾತಂತ್ರ್ಯಪೂರ್ವ ಭಾರತದಲ್ಲಿ ಸ್ವಾತಂತ್ರ್ಯದ ಹೊಂಗನಸು ಕಾಣುತ್ತ ಚಳುವಳಿಗಳಲ್ಲಿ ಭಾಗವಹಿಸುವ ದೇಶಾಭಿಮಾನಿ ಆದರ್ಶ ಯುವಕ ರತ್ನಾಕರ ಒಂದೆಡೆಯಾದರೆ, ಆಂಗ್ಲರ ಆಡಂಬರಕ್ಕೆ ಮಾರುಹೋಗಿ ಇದ್ದ ಗುಣ, ರೂಪ, ಆರೋಗ್ಯ, ನಡತೆಗಳನ್ನು ಕಡೆಗಣಿಸಿ ಇಂಗ್ಲೀಷ ಕಲಿತಿಲ್ಲವೆಂಬ ಒಂದೇ ಒಂದು ಕಾರಣಕ್ಕಾಗಿ ಕಾವೇರಿಯನ್ನು ತಿರಸ್ಕರಿಸಿದ ವೆಂಕಣ್ಣ ಇನ್ನೊಂದೆಡೆಗೆ. ಹೀಗೆ ಪರಸ್ಪರ ವೈರುದ್ಧ್ಯದ ಸ್ವಭಾವ ಚಿತ್ರಣಗಳನ್ನು ಕೃಷ್ಣಶರ್ಮರು ಯಶಸ್ವಿಯಾಗಿ ನಿರೂಪಿಸಿದ್ದಾರೆ. ಓದುಗರ ಮನಸ್ಸಿನ ಮೇಲೆ ಇಲ್ಲಿಯ ಸನ್ನಿವೇಶಗಳು ಶಾಶ್ವತವಾಗಿ ಮೂಡುತ್ತವೆ.

ಕೃಷ್ಣಶರ್ಮರ ಐತಿಹಾಸಿಕ ಕಾದಂಬರಿ 'ರಾಜಯೋಗಿ' ೧೯೩೪ರಲ್ಲಿ, 'ಅಶಾಂತಿಪರ್ವ' ೧೯೩೫ ರಲ್ಲಿ ಪ್ರಕಟವಾಗಿದ್ದರೂ ಐತಿಹಾಸಿಕ ಚಾರಿತ್ರಿಕ ದೃಷ್ಟಿಯಿಂದ ನೋಡಿದರೆ ೧೯೬೧ರಲ್ಲಿ ಪ್ರಕಟವಾದ 'ಮಲ್ಲಿಕಾರ್ಜುನ' ಕಾದಂಬರಿಯೇ ಮೊದಲನೆಯದಾಗುತ್ತದೆ. ಹುಕ್ಕಬುಕ್ಕರ ಪರಾಕ್ರಮದಿಂದ ಭವ್ಯಗೊಂಡಿದ್ದ ವಿಜಯನಗರ ಸಾಮ್ರಾಜ್ಯದ ವೈಭವ ಮಲ್ಲಿಕಾರ್ಜುನ ದೊರೆಯ ನಂತರ ಹೇಗೆ ಅವನತಿ ಹೊಂದುತ್ತಿತೆಂಬುದನ್ನು ಕಣ್ಣಿಗೆ ಕಟ್ಟುವಂತೆ ನಿರೂಪಿಸಲು ಈ ಮೂರೂ ಕಾದಂಬರಿಗಳು ರಚಿತಗೊಂಡಿವೆ. ಮಲ್ಲಿಕಾರ್ಜುನ ದೊರೆಗೆ ಪಟ್ಟಾಭಿಷೇಕವಾದುದು ೧೩೬೮ರಲ್ಲಿ. ಪ್ರಾರಂಭದ ಕೆಲವು ದಿನಗಳು ಸುಸೂತ್ರವಾಗಿ ಕಳೆದರೂ ಬರಬರುತ್ತ ರಾಜಕೀಯದಲ್ಲಿ ಸಫಲತೆಯನ್ನು ಕಾಣದ ಕೆಲವರು ಗುಂಪುಗಟ್ಟತೊಡಗಿ ಅಪಪ್ರಚಾರ ನಡೆಸಿದುದರಿಂದ ಜನತೆಯಲ್ಲಿ ಮೊದಲಿನ ನಂಬಿಗೆ ನಿಷ್ಠೆ ಉಳಿಯುವದಿಲ್ಲ. ಇದನ್ನರಿತ ದಂಡನಾಯಕ ಲಕ್ಕಣ್ಣ ದಂಡೇಶ ತನ್ನ ಪದವಿಯನ್ನು ಇನ್ನೊಬ್ಬರಿಗೆ ವಹಿಸಿಕೊಟ್ಟು ತಾನು ಸಾಳ್ವ ನರಸಿಂಹ ಹಾಗೂ ಚೆಂದಲೆಯರೊಡನೆ ಜನಜಾಗ್ರತಿ ಕಾರ್ಯದಲ್ಲಿ ತೊಡಗುತ್ತಾನೆ. ಕಪಿಲೇಶ್ವರ ಮೊದಲಿನಿಂದಲೂ ವಿಜಯನಗರ ಸಾಮ್ರಾಜ್ಯದ ವೈರಿ. ಅಸಂತೃಪ್ತ ಅಧಿಕಾರಿಗಳ ಮನೋಭಿಲಾಷೆಯನ್ನರಿತು ಇದೇ ತಕ್ಕ ಸಮಯವೆಂದು ಅರಿತು ಬಹಮನಿ ಸುಲ್ತಾನರೊಂದಿಗೆ ಸಹಾಯ ಪಡೆಯುತ್ತಾನೆ. ವಸಂತೋತ್ಸವದಲ್ಲಿ ಮಲ್ಲಿಕಾರ್ಜುನ ದೊರೆಯನ್ನು ಕೊಲ್ಲಲು ಕಪಿಲೇಶ್ವರ ಸಂಚು ಹೂಡುತ್ತಾನೆ. ಆದರೆ ಸಂಚು ವಿಫಲಗೊಳ್ಳುತ್ತದೆ. ಬಹಮನಿ ಸುಲ್ತಾನರೊಂದಿಗೆ ಸೇರಿಕೊಂಡು ವಿಜಯನಗರದ ಮೇಲೆ ದಾಳಿ ಮಾಡಿದರೂ ಸಾಳ್ವ ನರಸಿಂಹರಂತಹ ಮೇಧಾವಿಗಳ ಪ್ರಯತ್ನದಿಂದಾಗಿ ಸೋಲುತ್ತಾನೆ. ಬಹಮನೀಸುಲ್ತಾನ ಓಡಿಹೋಗುತ್ತಾನೆ. ಮಲ್ಲಿಕಾರ್ಜುನ ದೊರೆಯನ್ನು ಈ ಸಂದರ್ಭದಲ್ಲಿ ರಕ್ಷಿಸಲು ಹೋದ ಚೆಂದಲೆ ಗಾಯಗೊಂಡು ಹಾಸಿಗೆ ಹಿಡಿದು ಸಾವನ್ನಪ್ಪುತ್ತಾಳೆ. ಇಲ್ಲಿಗೆ 'ಮಲ್ಲಿಕಾರ್ಜುನ' ಕಾದಂಬರಿ ಮುಕ್ತಾಯಗೊಳ್ಳುತ್ತದೆ. 'ರಾಜಯೋಗಿ' ಕಾದಂಬರಿ ಇದರ ಮುಂದಿನ ಭಾಗ. ಮಲ್ಲಿಕಾರ್ಜುನ ದೊರೆಯ ನಂತರ ಅವನ ವಾರಸುದಾರರಾದ ರಾಜಶೇಖರ ಹಾಗೂ ಪೆದ್ದರಾಯರನ್ನು ಲಕ್ಷಿಸದೆ ವಿರೂಪಾಕ್ಷರಾಯ ಸಿಂಹಾಸನವನ್ನೇರುತ್ತಾನೆ. ವಿರೂಪಾಕ್ಷರಾಯ ವಿಷಯಲಂಪಟ, ಸುಖೋಪಭೋಗಗಳಲ್ಲಿಯೆ ಕಾಲಹರಣ ಮಾಡಿ ಜನತೆಯ ಆಶೋತ್ತರಗಳನ್ನು ಕಡೆಗಣಿಸುತ್ತಾನೆ. ತನ್ನ ವಿಲಾಸೀ ಜೀವನಕ್ಕೆ ಅಡ್ಡ ಬರುವವರನ್ನು ಸೆರೆಮನೆಗಟ್ಟುತ್ತಾನಲ್ಲದೆ ರಾಜಶೇಖರನನ್ನು ಕೊಲ್ಲಿಸಲು ಬಂಧಿಯಾಗಿರಿಸುತ್ತಾನೆ. ಬಹಮನಿ ಸುಲ್ತಾನರು ಇಂತಹ ಸಂದರ್ಭಗಳನ್ನೇ ಕಾಯುತ್ತಿರುತ್ತಾರೆ. ನಾಸೀರ ಮಹಮ್ಮದರಂತಹ ಗುಪ್ತಚಾರರು ವಿಜಯನಗರಕ್ಕೆ ಬಂದು ವಿರೂಪಾಕ್ಷರಾಯನ ಭೋಗವಿಲಾಸಗಳನ್ನು ಉತ್ತೇಜಿತಗೊಳಿಸುತ್ತಾರೆ. ರಾಜಶೇಖರ ರಾಜಪುತ್ರನಾದರೂ ರಾಜಕೀಯ ಜಂಜಾಟದಿಂದ ದೂರ ಉಳಿದು ನಿಸರ್ಗ ಸೌಂದರ್ಯದಲ್ಲಿ ಕಾಲ ಕಳೆಯುವವ. ಕೆಲ ದೇಶಪ್ರೇಮಿಗಳು ವಿರೂಪಾಕ್ಷರಾಯನ ಆಡಳಿತಕ್ಕೆ ಬೇಸತ್ತು ರಾಜಶೇಖರನಲ್ಲಿ ರಾಜಕೀಯತೆಯ ಪ್ರಜ್ಞೆಯನ್ನು ಜಾಗೃತಗೊಳಿಸುತ್ತಾರೆ. ವಿರೂಪಾಕ್ಷರಾಯ ನಾಸೀರ ಮಹಮ್ಮದನ ಮಗಳನ್ನು ಮದುವೆಯಾಗಲು ಸಿದ್ಧನಾಗುತ್ತಾನೆ. ಬಹಮನಿ ಸುಲ್ತಾನರು ಮದುವೆಯ ಸಮಯದಲ್ಲಿಯೇ ವಿಜಯನಗರವನ್ನು ಕಬಳಿಸಲು ಹೊಂಚು ಹಾಕುತ್ತಾರೆ. ಧರ್ಮಾಭಿಮಾನಿ, ದೇಶಪ್ರೇಮಿ ಹೇಮಾಂಬಿಕೆಯ ಪ್ರಯತ್ನದಿಂದ ರಾಜಶೇಖರ ಬಿಡುಗಡೆ ಹೊಂದಿ ವೇಷಾಂತರದಿಂದ ಹೋಗಿ ವಿರೂಪಾಕ್ಷರಾಯನನ್ನು ಕೊಲ್ಲುತ್ತಾನೆ. ರಾಜ್ಯದ ಹಿತದ ದೃಷ್ಟಿಯಿಂದ ವಿರೂಪಾಕ್ಷರಾಯನನ್ನು ಕೊಲ್ಲುವದೇ ತನ್ನ ಕರ್ತವ್ಯ ಎಂದು ತಿಳಿದ ರಾಜಶೇಖರ ಇಲ್ಲಿ ತಪ್ಪಿತಸ್ಥನೆನಿಸುವದಿಲ್ಲ. ಜನರ ಪ್ರೀತಿ ವಿಶ್ವಾಸ ಅಭಿಮಾನಗಳಿಗೆ ಪಾತ್ರನಾದ ರಾಜಶೇಖರನೇ ಸಿಂಹಾಸನವನ್ನೇರಬೇಕಿತ್ತಾದರೂ ಆತ ರಾಜಕೀಯದಿಂದ ದೂರ ಉಳಿಯುವದೆಂದೇ ತೀರ್ಮಾನಿಸಿದುದರಿಂದ ಪೆದ್ದರಾಯ ಸಿಂಹಾಸನವನ್ನೇರುತ್ತಾನೆ. ರಾಜಶೇಖರ 'ರಾಜಯೋಗಿ' ಯಾಗಿಯೇ ಕಾಲ ನೂಕುತ್ತಾನೆ. ಇದರ ನಂತರದ ಕಾದಂಬರಿ 'ಅಶಾಂತಿಪರ್ವ' ದಳಪತಿಯಾದ ದೇವಣ್ಣನಾಯಕನ ಮಗಳು ರತ್ನಾಂಬಿಕೆ ಹಾಗೂ ಪೆದ್ದರಾಯ ಚಿಕ್ಕಂದಿನಿಂದಲೇ ಕೂಡಿಬೆಳೆದವರು. ವಯಸ್ಕರರಾದಾಗ ಅವರಲ್ಲಿ ಪ್ರೇಮ ಅಂಕುರಿಸುತ್ತದೆ.

ಜನತೆಯು ಸುಖ ಮರೆತು ಭೋಗಸಕ್ತನಾಗಿ ಅಡ್ಡದಾರಿಯನ್ನೇ ತುಳಿಯುತ್ತಿರುವ ವಿರೂಪಾಕ್ಷರಾಯನನ್ನೂ ಕೊಲ್ಲುವದೇ ತನ್ನ ಗುರಿ ಎಂದು ಪೆದ್ದರಾಯ ಘೋಷಿಸಿದಾಗ ರತ್ನಾಂಬಿಕೆ ವಿರೂಪಾಕ್ಷರಾಯನನ್ನು ಕೊಲ್ಲುವ ವೀರನನ್ನೇ ತಾನು ಮದುವೆಯಾಗುವದಾಗಿ ಹೇಳುತ್ತಾಳೆ. ಆದರೆ ವಿರೂಪಾಕ್ಷರಾಯನನ್ನು ಕೊಂದವನು ರಾಜಶೇಖರ ಎಂದು ತಿಳಿದಾಗ ಸಹಜವಾಗಿಯೇ ರಾಜಶೇಖರನ ವೀರತನಕ್ಕೆ ಮನಸೋಲುತ್ತಾಳೆ. ಪೆದ್ದರಾಯ ಸಾಳ್ವ ನರಸಿಂಹನಾಯಕನ ಮಗಳಲ್ಲೂ ಪ್ರೇಮವನ್ನಿರಿಸಿಕೊಂಡಿರುತ್ತಾನೆ. ಆದರೆ ಅವಳ ವಿವಾಹ ತುಳುವ ನರಸಿಂಹನೊಡನೆ ನಿಶ್ಚಯವಾಗುತ್ತದೆ. ಪಟ್ಟಾಭಿಷೇಕದ ಸಮಯದಲ್ಲಿ ಅಹಿತ ಘಟನೆಗಳು ಸಂಭವಿಸುವದು ಉಚಿತವಲ್ಲವೆಂದು ಸಾಳ್ವ ನರಸಿಂಹ ಚಂದ್ರಗಿರಿಗೆ ಹೋದಾಗ ಪೆದ್ದರಾಯ ಅವನ ಸ್ಥಾನಕ್ಕೆ ತನ್ನ ಬಾಲ್ಯ ಸ್ನೇಹಿತ ಈಶ್ವರ ನಾಯಕನನ್ನು ನಿಯಮಿಸುತ್ತಾನೆ. ರಾಜಶೇಖರನ ಕುತಂತ್ರವೆಂದು ತಿಳಿದು ಕಿಡಿಗೇಡಿಗಳು ರಾಜಶೇಖರನ ಕೊಲೆ ಮಾಡುತ್ತಾರೆ. ರತ್ನಾಂಬಿಕೆಗೆ ಹುಚ್ಚು ಹಿಡಿಯುತ್ತದೆ. ಜನತೆ ಅಸಂತೋಷ ಹೊಂದಿ ದಂಗೆ ಎಬ್ಬಿಸುತ್ತಾರೆ. ಪೆದ್ದರಾಯನಿಗೆ ದಿಕ್ಕೇ ತಿಳಿಯುವದಿಲ್ಲ. ಪರಾರಿಯಾಗಿ ಬಿಡುತ್ತಾನೆ. ವಿಷಯ ತಿಳಿದ ಸಾಳ್ವ ನರಸಿಂಹ ಚಂದ್ರಗಿರಿಯಿಂದ ಆಗಮಿಸಿ ಜನತೆಯ ಒತ್ತಾಯದ ಮೇರೆಗೆ ತಾನೇ ಸಿಂಹಾಸನವನ್ನೇರುತ್ತಾನೆ.

ಐತಿಹಾಸಿಕ ಕಾದಂಬರಿ ಬರವಣಿಗೆಗೆ ಅಪರಿಮಿತ ಜ್ಞಾನ, ಶ್ರದ್ಧೆ ಕಾಲಾನುಕ್ರಮಣಿಕೆಯ ಘಟನೆಗಳನ್ನು ನಿರೂಪಿಸುವ ಕಲೆ ಹಸ್ತಗತವಾಗಿರಬೇಕು. ಕೃಷ್ಣಶರ್ಮರು ಐತಿಹಾಸಿಕ ಕಾದಂಬರಿಯ ಲಕ್ಷಣಗಳನ್ನು ಗುರುತು ಹಿಡಿದು ಈ ಮೂರು ಯಶಸ್ವಿ ಕಾದಂಬರಿಗಳನ್ನು ಸಾಹಿತ್ಯ ಪ್ರಪಂಚಕ್ಕೆ ನೀಡಿದ್ದಾರೆ.

**ಬಾನುಲಿ ರೂಪಕಗಳು :**

ಧಾರವಾಡ ಆಕಾಶವಾಣಿ ಅಸ್ತಿತ್ವಕ್ಕೆ ಬಂದ ಮೇಲೆ ಕೃಷ್ಣಶರ್ಮರು ಬಾನುಲಿ ರೂಪಕಗಳ ರಚನೆಗೆ ಕೈ ಹಾಕಿದರು. ಅಂದರೆ ೧೯೫೦ ರಿಂದೀಚೆಗೆ ಈ ರೂಪಕಗಳು ಪ್ರಾರಂಭ ಬಾನುಲಿ ಬರವಣಿಗೆ ಒಂದು ವಿಶಿಷ್ಟ ಪ್ರಕಾರದ್ದು ಎಲ್ಲರಿಗೂ ಸಾಧಿಸುವಂತಹದಲ್ಲ. ಇಲ್ಲಿ ಕೇವಲ ಧ್ವನಿ ಮಾತ್ರದಿಂದಲೇ ಕಥೆ, ಸನ್ನಿವೇಶ, ಭಾವಗಳನ್ನು ಅಭಿವ್ಯಕ್ತಗೊಳಿಸಬೇಕಾಗುತ್ತದೆ. ವಾಕ್ಯಗಳು ಚಿಕ್ಕವಿದ್ದು, ಸರಳವಿದ್ದು, ಜನಸಾಮಾನ್ಯ ಕೇಳಿದ ತಕ್ಷಣವೇ ಅರ್ಥವಾಗುವ ಗುಣ ಹೊಂದಿರಬೇಕು. ಕೃಷ್ಣಶರ್ಮರು ಇದರಲ್ಲಿ ಪರಿಣಿತರು. ಅಂತೆಯೇ ಅವರ ೩೭ ರೇಡಿಯೋ ರೂಪಕಗಳು ಆಕಾಶವಾಣಿಯಿಂದ ಪ್ರಸಾರಗೊಂಡಿವೆ. ಇವುಗಳಲ್ಲಿ ೧೭ ಈಗಾಗಲೇ ಪುಸ್ತಕರೂಪದಲ್ಲಿ ಪ್ರಕಟವಾಗಿವೆ.

ಮೊದಲನೆಯ ಪುಸ್ತಕ 'ಬೆಳವಡಿ ಮಲ್ಲಮ್ಮ'. ೧೯೫೧ರಲ್ಲಿ ಇದರ ಪ್ರಕಟಣೆಯಾಯಿತು. ಇದರಲ್ಲಿ 'ಬೆಳವಡಿ ಮಲ್ಲಮ್ಮ', 'ನವರಾತ್ರಿ', 'ಬಲಿಚಕ್ರವರ್ತಿ', 'ಅಮೃತಾತ್ಮ' 'ತಂಬಿಟ್ಟು' ಹಾಗೂ 'ನಾನೇನಾಗುವ ?' ಎಂಬ ಆರು ರೂಪಕಗಳಿವೆ. ಬೆಳವಡಿ ಮಲ್ಲಮ್ಮನ ಕತೆ ಕರ್ನಾಟಕದ ಮನೆ ಮನೆಯಲ್ಲೂ ಗೊತ್ತು. ಈ ಧೀರ ಮಹಿಳೆಯ ಕುರಿತು ರೂಪಿಸಿದ ರೂಪಕ ಮಲ್ಲಮ್ಮನ ವ್ಯಕ್ತಿತ್ವವನ್ನು ಚನ್ನಾಗಿ ಪರಿಚಯಿಸುತ್ತದೆ. 'ನವರಾತ್ರಿ' ರೂಪಕ ನವರಾತ್ರಿ (ದೀಪಾವಳಿ) ಹಬ್ಬದ ಆಚರಣೆಯ ಜೊತೆಗೆ ವಿಜಯನಗರ ಸಾಮ್ರಾಜ್ಯದ ವೈಭವವನ್ನು ನಿರೂಪಿಸುತ್ತದೆ. 'ಬಲಿಚಕ್ರವರ್ತಿ' ಒಂದು ಪೌರಾಣಿಕ ರೂಪಕ. ದೈತ್ಯ ಕುಲದಲ್ಲಿ ಹುಟ್ಟಿದ್ದರೂ ಸಾತ್ವಿಕ ವ್ಯಕ್ತಿಯಾದ, ಮಹಾ ದಾನಿಯಾದ ಬಲಿಚಕ್ರವರ್ತಿಯ ಕಥೆ ಇದರಲ್ಲಿ ಮೂಡಿನಿಂತಿದೆ. 'ಅಮೃತಾತ್ಮ' ಐತಿಹಾಸಿಕ ರೂಪಕ. ಮಹಾತ್ಮಾ ಗಾಂಧಿ, ಸರೋಜಿನಿ ನಾಯ್ಡು, ವಲ್ಲಭಭಾಯಿ ಪಟೇಲ, ರಮಣ ಮಹರ್ಷಿ ಹಾಗೂ ಅರವಿಂದ ಮಹರ್ಷಿಗಳ ಕುರಿತದ್ದು. ಈ ಮಹನಿಯರು ಹೋದರೇನಾಯಿತು. ಹೊಸಬರು ಮುಂದೆ ಬರುವರು ಎಂಬ ಆಶಾದಾಯಕ ಉತ್ತರವನ್ನು ಕಾಲಪುರುಷ ಕೊಡುತ್ತಾನೆ. 'ತಂಬಿಟ್ಟು' ನಾಗಪಂಚಮಿ ಹಬ್ಬದ ಕುರಿತಾದದ್ದು. 'ತಂಬಿಟ್ಟು' ವಿಶೇಷವಾಗಿ ನಾಗಪಂಚಮಿ ಹಬ್ಬದಲ್ಲಿ ಮಾಡುವ ಒಂದು ಖಾದ್ಯ. ಇದೇ ಹೆಸರನ್ನು ರೂಪಕಕ್ಕೆ ಕೊಡಲಾಗಿದೆ. ಈ ರೂಪಕದಲ್ಲಿ ಕೃಷ್ಣಶರ್ಮರು ತಮ್ಮ 'ಬಾ ಶ್ರಾವಣಾ ಶುಭ ಸಮೀರ', 'ಪಂಚಮಿ ಬಂತ ಸನಿಯಾಕ' ಎಂಬ ಹಾಡುಗಳನ್ನೂ ಹಾಗೂ ಪಂಜೆಯವರ 'ನಾಗರ ಹಾವೇ —' ಎಂಬ

ಹಾವನ್ನೂ ಅಳವಡಿಸಿದ್ದಾರೆ. ನಾಗಪ್ಪನಿಗೆ ಹಾಲೆರೆದು ತಂಬಿಟ್ಟಿನ ನೈವೇದ್ಯ ಮಾಡಿದರೆ ಕುಟುಂಬಕ್ಕೆ ಕಲ್ಯಾಣ ವಾಗುವದು ಎಂಬ ಸಾಂಪ್ರದಾಯಿಕ ನಂಬಿಗೆಯನ್ನು ಈ ರೂಪಕ ಚಿತ್ರಿಸುವದು. 'ನಾನೇನಾಗುವೆ ?' ಮಕ್ಕಳಿಗಾಗಿ ರಚಿತವಾದದ್ದು. ಶಾಲೆಯ ಮಕ್ಕಳು ಮಾಸ್ತರರೊಡನೆ ವಿಹಾರಕ್ಕೆ ಹೋದಾಗ ನಡೆದ ಪ್ರಶ್ನೋತ್ತರಗಳು ಈ 'ನಾನೇನಾಗುವೆ ?'. ಮಕ್ಕಳಿಗೆ ಹೆಚ್ಚು ಹಿಡಿಸುವಂತಹದು.

'ಬೆಂದ ಹೃದಯ' ಕೃಷ್ಣಶರ್ಮರ ಎರಡನೆಯ ರೂಪಕ ಸಂಗ್ರಹ, ೧೯೫೪ರಲ್ಲಿ ಪ್ರಕಟವಾದುದು. ಹೆಣ್ಣು ಮನಸ್ಸು ಮಾಡಿದರೆ ಮನೆಯನ್ನು ಸ್ಮಶಾನವನ್ನಾಗಿಯೂ ಮಾಡಬಲ್ಲಳು ಎಂಬುದನ್ನು ಎತ್ತಿ ತೋರಿಸುತ್ತದೆ. ಗಂಡ ತೀರಿಕೊಂಡ ಮೇಲೆ ಗಂಗಾಬಾಯಿ ತನ್ನ ತಂಗಿ ರತ್ನಾಳ ಮನೆಗೆ ಬರುತ್ತಾಳೆ, ಅವಳ ಗಂಡ ಶಾಮು. ಶಾಮುನ ಕಕ್ಕನ ಮೇಲೆ ಗಂಗಾಬಾಯಿಗೆ ಮನಸ್ಸಾಗುತ್ತದೆ. ಅವನು ವಶವಾಗದಿರಲು ರತ್ನಾಳನ್ನು ಆತ ಬಲಾತ್ಕರಿಸಿದನೆಂದು ಸುದ್ದಿ ಎಬ್ಬಿಸುತ್ತಾಳೆ. ಪರಿಶುದ್ಧ ಹೃದಯದ ರಂಗಣ್ಣ, ಮುಗ್ಧ ಹೃದಯದ ಶ್ಯಾಮು, ಕೋಮಲ ಹೃದಯದ ರತ್ನಾ ಮೂವರೂ ಈ ಸುದ್ದಿಯಿಂದ ದುಃಖಿತರಾಗುತ್ತಾರೆ. ರಂಗಣ್ಣ, ಶ್ಯಾಮು- ಇಬ್ಬರೂ ಸಾವನ್ನಪ್ಪುತ್ತಾರೆ. ಇದೊಂದು ಸಾಮಾಜಿಕ ಕಥಾತ್ಮಕ ರೂಪಕ, 'ಕಾಣದ ಕೈ' ಕೂಡ ಸಾಮಾಜಿಕ ರೂಪಕ. ವ್ಯಭಿಚಾರದ ಸುಳ್ಳು ಸುದ್ದಿಯಿಂದ ಕಂಗಾಲಾದವರ ಕಥೆಯನ್ನೊಳಗೊಂಡದ್ದು. ಆದರೆ ಇದರಲ್ಲಿ ಯಾರೂ ಸಾವನ್ನಪ್ಪದೆ ಸುದ್ದಿ ಸುಳ್ಳೆಂಬುದನ್ನು ಅರಿತವರಾಗಿದ್ದಾರೆ. 'ನಮ್ಮ ಬದುಕು' ಎಂಬ ತಮ್ಮ ಕಥಾ ಸಂಕಲನದಲ್ಲಿಯ ಒಂದು ಕಥೆ ಈ'ಕಾಣದ ಕೈ' ರೂಪಕ. 'ಶಿವಭಕ್ತ ನಂದನಾರ್' ರೂಪಕ ಹನ್ನೆರಡನೆಯ ಶತಮಾನದಲ್ಲಿ ತಮಿಳುನಾಡಿನಲ್ಲಿದ್ದ ಹದಿನಾರು ವಯಸ್ಸಿನ ಹುಡುಗ ನಂದನನ್ನು ಕುರಿತದ್ದು. ಅಸ್ಪೃಶ್ಯನಾದ ಆತನ ಶಿವಭಕ್ತಿ ಉಳಿದ ಜಾತಿಯವರಿಗೆ ಹಿಡಿಸದಾಗ ಅವರು ನಂದನನ್ನು ಪೀಡಿಸಿದ ಪರಿ ಇಲ್ಲಿದೆ. ಈ ಸಂಗ್ರಹದ ನಾಲ್ಕನೆಯ ರೂಪಕ 'ಸೀಮೋಲ್ಲಂಘನ'ವೂ, 'ನವರಾತ್ರಿ'ಯಂತೆ ದೀಪಾವಳಿ ಹಬ್ಬದ ಆಚರಣೆಯ ಜೊತೆಗೆ ವಿಜಯನಗರ ಸಾಮ್ರಾಜ್ಯದ ವೈಭವವನ್ನು ನಿರೂಪಿಸುತ್ತದೆ. ಕೊನೆಯ ರೂಪಕ 'ಹುಡುಗರ ಆಟ' ಮಕ್ಕಳಿಗೆ ಮನೋರಂಜನೆ ಒದಗಿಸುತ್ತದೆ.

"ಮುಂಡರಿಗೆಯ ಗಂಡುಗಲಿ' ೧೯೬೨ರಲ್ಲಿ ಪ್ರಕಟವಾದ ರೂಪಕ. ೧೮೫೭ರ ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಮುಂಡರಿಗಿಯ ಭೀಮರಾಯನ ಶೌರ್ಯ ಸಾಹಸವನ್ನು ಈ ರೂಪಕ ಬಿಂಬಿಸುತ್ತದೆ. ಕೊಪ್ಪಳದ ಬಳಿಯ ಬೆಟ್ಟದ ಬಂಡೆಗಳು ಮುಂಡರಿಗೆಯ ಈ ಗಂಡುಗಲಿ ಭೀಮರಾಯನ ಸಾಹಸ ಕಥೆಯನ್ನು ಈಗಲೂ ಉದ್ಘೋಷಿಸುತ್ತವೆಯಂತೆ.

೧೯೬೩ ರಲ್ಲಿ ಪ್ರಕಟವಾದ 'ಪಂಚಗಂಗಾ', ಹೆಳವನಕಟ್ಟೆ ಗಿರಿಯಮ್ಮ, ಪುರಂದರದಾಸ, ವಿಜಯನಗರದ ಮಾಧವಾಚಾರ್ಯ, ಶಂಕರಾಚಾರ್ಯ ಹಾಗು ಭಕ್ತ ಸುಧಾಮ ಈ ಐವರ ಸಾಧನೆಗಳನ್ನು ಪರಿಚಯಿಸಿಕೊಡುವ ಐದು ರೂಪಕಗಳ ಸಂಗ್ರಹ.

ಇವೆಲ್ಲವೂ ಪುಸ್ತಕರೂಪದಲ್ಲಿ ಹೊರಬಂದ ರೂಪಕಗಳು. ಧಾರವಾಡ ಆಕಾಶವಾಣಿಯಿಂದ ಪ್ರಸಾರವಾಗಿ, ಇನ್ನೂ ಪುಸ್ತಕರೂಪದಲ್ಲಿ ಪ್ರಕಟವಾಗದ ರೂಪಕಗಳು ಇಪ್ಪತ್ತು. ೧) ಸರ್ವಜ್ಞ ೨) ಚೌತಿಚಂದ್ರ ೩) ಗಂಗಾವತರಣ ೪) ಬುದ್ಧೋದಯ ೫) ವೇಣುಲೋಲ ೬) ಸುಮಿತ್ರಾ ೭) ರಾಮಾವತಾರ ೮) ರಾಜಶೇಖರ ೯) ಗಂಡುಗಲಿ ಕುಮಾರರಾಮ ೧೦) ಭಕ್ತ ಪುರಂದರ ದಾಸರು ೧೧) ಅಂಗೂಲಿಮಾಲಾ ೧೨) ಗಣೇಶ ವಿಲಾಸ ೧೩) ಮಮತೆಯ ಮುಡಿಪು ೧೪) ಅರಳಿದ ಜೀವ ೧೫) ಕಾರಹುಣ್ಣಿವೆ ೧೬) ಕನ್ನಡಿಗರ ವಿನೋದ ಲಹರಿ ೧೭) ಅಶೋಕ ಚಕ್ರ ೧೮) ವನ್ಯಮೃಗ ಪಶು ಸಂಕುಲನ ೧೯) ಕಾಮದಹನವೇ? ೨೦) ಭಾಷಾ ಬಾಂಧವ್ಯ.

ಕೃಷ್ಣಶರ್ಮರು ಬರೆದ ಈ ೩೭ ಬಾನುಲಿ ರೂಪಕಗಳು ಸಮರ್ಥ 'ತರಂಗ ರೂಪಕ'ಗಳಾಗಿ ಹೊರಬಂದಿವೆಯೆಂದರೆ ಉತ್ಪ್ರೇಕ್ಷೆಯೇನಿಲ್ಲ.

### ಪ್ರಬಂಧಗಳು :

ಕೃಷ್ಣಶರ್ಮರು ಒಳ್ಳೆಯ ಪ್ರಬಂಧಕಾರರು. ಸಂಶೋಧನೆ, ಕನ್ನಡನಾಡಿನ ಸಂಸ್ಕೃತಿ ಹಾಗೂ ಸಾಹಿತ್ಯ ವಿಮರ್ಶೆ ಕುರಿತು ೧) ಕರ್ನಾಟಕ ಜನಜೀವನ ೨) ಸಾಹಿತ್ಯವು ಸಾಗಿರುವ ದಾರಿ ೩) ನಮ್ಮ ಸಂಸ್ಕೃತಿ ಪರಂಪರೆ ೪) ಸಾಹಿತ್ಯ ವಿಹಾರ ಎಂಬ ನಾಲ್ಕು ಕೃತಿಗಳು ಪ್ರಕಟವಾಗಿವೆ.

೧೯೩೯ರಲ್ಲಿ ಪ್ರಕಟವಾದ 'ಕರ್ನಾಟಕ ಜನಜೀವನ' ಕನ್ನಡಿಗರ ಕೋಟೆ ಕಾಳಗ, ಕನಕದಾಸರು ಕಂಡ ವಿಜಯನಗರ, ಚಾರಣ ಕವಿ ಗೋವಿಂದ ವೈದ್ಯ ಎಂಬ ಮೂರು ಪ್ರಬಂಧಗಳನ್ನೊಳಗೊಂಡಿದೆ. ನಮ್ಮ ಪೂರ್ವಜರ ಜನಜೀವನವನ್ನು ಪರಿಚಯ ಮಾಡಿಕೊಡುವದು ಈ ಮೂರು ಪ್ರಬಂಧಗಳ ಮೂಲ ಉದ್ದೇಶವಾಗಿದೆ. ನಮ್ಮ ಪೂರ್ವಜರು ತಮ್ಮ ಗ್ರಾಮಸಂರಕ್ಷಣೆಗಾಗಿ ಕೋಟೆಗಳನ್ನು ಕಟ್ಟಿಕೊಳ್ಳುತ್ತಿದ್ದರು. ವೈರಿಗಳು ಗ್ರಾಮದ ಮೇಲೆ ದಾಳಿ ಮಾಡಲು ಬಂದರೆ ಗ್ರಾಮದ ಶೂರರು ಕೋಟೆಯಲ್ಲಿ ಕುಳಿತುಕೊಂಡು ಬಂದೂಕು ತುಪಾಕಿಗಳಿಂದ ಅವರನ್ನು ಸದೆಬಡಿಯುತ್ತಿದ್ದರು. ಈ ರೀತಿಯ ಕೋಟೆ ಕಾಳಗ, ಪ್ರಾಚೀನ ಕರ್ನಾಟಕ ಜನತೆಯು ಅನುಸರಿಸುತ್ತಿತ್ತೆಂದು ಇತಿಹಾಸ ಹೇಳುತ್ತದೆ. ಕೃಷ್ಣಶರ್ಮರು ತಮ್ಮ ಈ 'ಕನ್ನಡಿಗರ ಕೋಟೆ ಕಾಳಗ' ಪ್ರಬಂಧದಲ್ಲಿ ಕೋಟೆ ಕೊತ್ತಳಗಳ ಅವಶ್ಯಕತೆ, ಪ್ರಕಾರಗಳು, ಅಂಗಾಂಗಗಳು, ಸಂರಕ್ಷಣಾ ಸಾಧನಗಳು ಮುಂತಾದವುಗಳನ್ನು ವಿವರವಾಗಿ ತಿಳಿಸಿದ್ದಾರೆ. ಭಕ್ತ ಶ್ರೇಷ್ಠ, ಕೀರ್ತನ ಕರ್ತೃ ಕನಕದಾಸರು ಕಂಡ ವಿಜಯನಗರವನ್ನು ತಮ್ಮ ಎರಡನೆಯ ಪ್ರಬಂಧದಲ್ಲಿ ನಿರೂಪಿಸಿದ್ದಾರೆ. ವಿಜಯನಗರವನ್ನು ಕೃಷ್ಣದೇವರಾಯ ಆಳುತ್ತಿರುವಾಗ ಕನಕದಾಸರು ಮಾಂಡಲಿಕರಾಗಿದ್ದರಂತೆ. ಕೃಷ್ಣದೇವರಾಯನ ಪ್ರೇರಣೆಯಿಂದ ವೈಭಯುತವಾಗಿ ಜರುಗುತ್ತಿದ್ದ ಜಾನಪದ ಉತ್ಸವವಾದ ಹೋಳಿಹಬ್ಬ-ವಸಂತೋತ್ಸವ ಕಾಲಕ್ಕೆ ಓದಲಿಕ್ಕೂ ಹಾಡಲಿಕ್ಕೂ ಅನುಕೂಲವಾಗುವಂತೆ ಕನಕದಾಸರು 'ಮೋಹನ ತರಂಗಿಣಿ' ಎಂಬ ಕಾವ್ಯ ರಚಿಸಿರಬಹುದಾಗಿ ಕೃಷ್ಣಶರ್ಮರು ಪ್ರತಿಪಾದಿಸಿದ್ದಾರೆ. ಪರದೇಶಗಳ ಪ್ರವಾಸಿಗಳು ಬರೆದ ವಿವರಗಳನ್ನು ಉದ್ಧರಿಸಿ ತಮ್ಮ ಪ್ರತಿಪಾದನೆಯನ್ನು ಸಮರ್ಥಿಸಿಕೊಳ್ಳುತ್ತಾರೆ. ರಾಜಧಾನಿ, ಕೋಟೆ-ಕೊತ್ತಳ, ಅರಮನೆ. ರಾಜಬೀದಿಗಳು, ಜನರ ಜೀವನ ವಿಧಾನ, ಹೊಲಗದ್ದೆ, ತೋಟ-ಕಾಲುವೆ, ಬೆಳೆಗಳು ಮುಂತಾದ ವಿವರಣೆಗಳನ್ನು ಕೃಷ್ಣಶರ್ಮರು 'ಮೋಹನ ತರಂಗಿಣಿ' ಯಿಂದ ಆರಿಸಿ ಈ ಪ್ರಬಂಧದಲ್ಲಿ ನಿರೂಪಿಸಿದ್ದಾರೆ. 'ಚಾರಣಕವಿ ಗೋವಿಂದ ವೈದ್ಯ' ಮೂರನೆಯ ಪ್ರಬಂಧ. ಕನ್ನಡಿಗರ ಕೆಚ್ಚನ್ನು ಕಾವ್ಯದಲ್ಲಿ ಹಿಡಿದಿಟ್ಟ ಮೊದಲನೆಯ ಐತಿಹಾಸಿಕ ವೀರಕಾವ್ಯವೆಂಬ ಕೀರ್ತಿಗೆ ಪಾತ್ರವಾಗುವ ಕೃತಿಯೊಂದರೆ ಕ್ರಿ.ಶ. ೧೬೪೮ರಲ್ಲಿ ರಚಿತವಾಗಿರುವ ಗೋವಿಂದ ವೈದ್ಯ ಕವಿಯ 'ಕಂಠೀರವ ನರಸರಾಜ ವಿಜಯ' ಎಂಬುದನ್ನು ಕೃಷ್ಣಶರ್ಮರು ಗುರುತಿಸಿ ಅವನನ್ನು ಕನ್ನಡದ ಮೊದಲ 'ಚಾರಣಕವಿ' ಎಂದು ಔಚಿತ್ಯಪೂರ್ಣವಾಗಿ ಹೆಸರಿಸಿದ್ದಾರೆ. 'ಕಂಠೀರವ ನರಸರಾಜ ವಿಜಯ' ಕಾವ್ಯದಲ್ಲಿ ದೇಶಾಭಿಮಾನ, ಮಹಮ್ಮದೀಯರ ಹಾವಳಿಯ ಭೀಕರತೆ, ಆ ಕಾಲದಲ್ಲಿಯ ಹಿಂದೂಗಳ ಮನಃಸ್ಥಿತಿ, ಯುದ್ಧದ ಮಾದರಿ, ಮೈಸೂರವರ ಕಗ್ಗೊಲೆಯ ಕಾಳಗ, ಯುದ್ಧ ಪ್ರಾವೀಣ್ಯಗಳನ್ನಲ್ಲದೆ ಜನತೆಯ ರೀತಿನೀತಿಗಳು, ಅರಮನೆಯ ವೈಭವ, ದೊರೆಯ ಒಡ್ಡೋಲಗ, ಸಾಮಾನ್ಯ ಜನರ ಊಟ-ಉಡಿಗೆ ಇತ್ಯಾದಿ ವಿಷಯಗಳನ್ನು ಗೋವಿಂದ ವೈದ್ಯ ಕವಿಯು ನಿರೂಪಿಸಿರುವವನ್ನು ಕೃಷ್ಣಶರ್ಮರು ಆಕರ್ಷಕವಾಗಿ ತಮ್ಮ ಈ ಪ್ರಬಂಧದಲ್ಲಿ ಹಿಡಿದಿಟ್ಟಿದ್ದಾರೆ. 'ಕಂಠೀರವ ನರಸರಾಜ ವಿಜಯ'ದ ಅಸಾಮಾನ್ಯ ಹಿರಿಮೆಯನ್ನು ಕೊಂಡಾಡುವ ಕೃಷ್ಣಶರ್ಮರು ಚಿಕಿತ್ಸಕ ದೃಷ್ಟಿಯಿಂದ ಹಳೆಯ ಕಾವ್ಯಗಳನ್ನು ಪರಿಶೀಲಿಸಿದರೆ ಎಂತಹ ಶ್ರೇಷ್ಠ ಸಂಪತ್ತು ಸಿಗುವದೆಂಬುದನ್ನು ಎತ್ತಿ ತೋರಿಸಿದ್ದಾರೆ.

'ಸಾಹಿತ್ಯವು ಸಾಗಿರುವ ದಾರಿ' ೧೯೩೯ ರಲ್ಲಿ ಪ್ರಕಟವಾದ ಪ್ರಬಂಧ ಸಂಕಲನ. ಹೆಸರೇ ಸೂಚಿಸುವಂತೆ ಇದರಲ್ಲಿ ಸಾಹಿತ್ಯಕ್ಕೆ ಅದರಲ್ಲೂ ವಿಶೇಷವಾಗಿ ವಿಮರ್ಶೆಗೆ ಸಂಬಂಧಿಸಿದ ಪ್ರಬಂಧಗಳಿವೆ. ಇದರೊಳಗಿನ ಮೊದಲನೆಯ ಪ್ರಬಂಧ 'ನಮ್ಮ ಸಾಹಿತ್ಯ ಸಾಗಿರುವ ದಾರಿ'ಯಲ್ಲಿ ಕೃಷ್ಣಶರ್ಮರು ಸಾಹಿತ್ಯವು ಸಾಗಿ ಬಂದಿರುವ ದಾರಿಯನ್ನು ವಿವರಿಸುತ್ತ ಇಂದಿನ ನವ್ಯ ಸಾಹಿತ್ಯವು ನಿರಾಶಾ

ವಾದವನ್ನು ನೆಲೆಗೊಳಿಸುವ ಗುರಿ ಹೊಂದಿದೆ ಎಂದು ಹೇಳಿದ್ದಾರೆ. ಸಾಹಿತ್ಯದ ಮೇಲೆ ವಿಜ್ಞಾನದ ಪ್ರಭಾವ, ಸಾಹಿತ್ಯ ಹಾಗೂ ಪುರುಷಾರ್ಥ ಸಾಧನೆ, ಸಾಹಿತ್ಯ ಮತ್ತು ಸಂಸ್ಕೃತಿ, ಇಂದಿನ ಸಾಹಿತ್ಯ ಹಾಗೂ ಕ್ಷಣಿಕ ಸಂತೋಷದ ವಾಚಕವರ್ಗ ಕುರಿತು ವಿವರಿಸಿದ್ದಾರೆ. ಇದರೊಳಗಿನ ಎರಡನೆಯ ಪ್ರಬಂಧ 'ಸಾಹಿತ್ಯ ವಿಮರ್ಶೆ'. ವಿಮರ್ಶೆ ಎಂದರೇನು ಎಂದು ಹೇಳುತ್ತ ವಿಮರ್ಶೆಯ ಅವಶ್ಯಕತೆ, ವಿಮರ್ಶಕನ ಗುಣ, ಸ್ಥಾನಮಾನ, ಕಾರ್ಯವ್ಯಾಪ್ತಿ ಕುರಿತು ವಿವೇಚಿಸಿದ್ದಾರೆ. 'ಜೀವನ ಸಾಗರ ಮಂಥನ ಅರ್ಥಾತ್ ಸಾಹಿತ್ಯಾಮೃತ ಜನ' ಮೂರನೆಯ ಪ್ರಬಂಧ. 'ಸಾಗರ ಮಂಥನ' ಎಂಬ ಅವರ ರೂಪಕವನ್ನೇ ಉದಾಹರಣೆಗಾಗಿ ತೆಗೆದುಕೊಂಡು 'ಸತ್ಯದ ಸಂಶೋಧನೆಯೇ ಸಾಹಿತ್ಯದ ತಳಹದಿ' ಎಂದಿದ್ದಾರೆ. ಹಳಗನ್ನಡ ಕಾಲದ ಜೈನ, ವೀರಶೈವ ಮತ್ತು ಬ್ರಾಹ್ಮಣ ಕವಿಗಳು ಅಸಹಜತೆಯ ಹಾಗೂ ಅಪ್ರಾಮಾಣಿಕ ಸಾಹಿತ್ಯವನ್ನೇ ಹೆಚ್ಚಾಗಿ ರಚಿಸಿದ್ದಾರೆಂದು ಹೇಳಿದ್ದಾರೆ. ವಾಸ್ತವಿಕತೆಯ ಆಧಾರದ ಮೇಲೆಯೇ ಬರಹಗಾರ ತನ್ನ ಕೃತಿಗಳನ್ನು ರಚಿಸಬೇಕೆಂಬುದು ಅವರ ಆಶಯ. 'ಸಾಹಿತ್ಯದಲ್ಲಿ ಅಶ್ಲೀಲತೆ' ಮುಂದಿನ ಪ್ರಬಂಧ. ಅಶ್ಲೀಲತೆಯೆಂಬುದು ಕಾಮಕ್ಕೆ ಸಂಬಂಧಿಸಿದುದು. ಕಾಮ ಮಾನವನ ಪುರುಷಾರ್ಥಗಳಲ್ಲೊಂದು. ಆದರೆ ಸಾಹಿತ್ಯದಲ್ಲಿ ಕಾಮಕ್ಕಿರುವ ಸ್ಥಾನವೇನು, ಎಷ್ಟು ಎಂಬುದನ್ನು ಈ ಪ್ರಬಂಧದಲ್ಲಿ ವಿವರಿಸಿದ್ದಾರೆ. ಆಧುನಿಕ ಸಾಹಿತ್ಯದಲ್ಲಿ ಅಶ್ಲೀಲತೆಯು ಅಂಶ ಹೆಚ್ಚಾಗಿರುವದಕ್ಕೆ ಕೃಷ್ಣಶರ್ಮರು ಅಸಮಾಧಾನಪಟ್ಟಿರುತ್ತಾರೆ. 'ಪ್ರಣಯ ಸಾಹಿತ್ಯ' ಪ್ರಬಂಧದಲ್ಲಿ ಕಾಮವು ಸುಸಂಸ್ಕೃತವಾದಾಗ ಪ್ರಣಯವಾಗುತ್ತದೆ ಎಂದು ವ್ಯಾಖ್ಯಾನಿಸುತ್ತ ಮುಗ್ಧ ಪ್ರಣಯ (ಪತಂಗ ಪ್ರಣಯ), ಕಾಮ ಪ್ರಣಯ (ಮಧುಕರ ಪ್ರಣಯ), ಅನುಭವ ಪ್ರಣಯ (ಆದರ್ಶ ಪ್ರಣಯ), ಪರಿಪಕ್ವಪ್ರಣಯ (ಆಧ್ಯಾತ್ಮಿಕ ಪ್ರಣಯ) ಎಂದು ನಾಲ್ಕು ಹಂತಗಳನ್ನು ಮಾಡಿ ಪ್ರತಿಯೊಂದು ಪ್ರಣಯದ ಗುಣಸ್ವಭಾವಗಳನ್ನು ವಿವರಿಸಿದ್ದಾರೆ. ನವ್ಯ ಸಾಹಿತ್ಯದ ಬಗ್ಗೆ ಅದರಲ್ಲೂ ನವ್ಯ ಕಾವ್ಯದ ಬಗ್ಗೆ ತಮ್ಮ ಬರಹಗಳಲ್ಲಿ ಆಗೊಮ್ಮೆ ಈಗೊಮ್ಮೆ ಅಸಮಾಧಾನ ವ್ಯಕ್ತಪಡಿಸಿದ ಕೃಷ್ಣಶರ್ಮರು 'ಕವನ ಸಾಹಿತ್ಯದ ನವನಿರ್ಮಾಣ' ಎಂಬ ಇಡೀ ಪ್ರಬಂಧದಲ್ಲಿ ತಮ್ಮ ಅಸಮಾಧಾನತೆಗಿರುವ ಕಾರಣಗಳನ್ನು ನವ್ಯ ಕಾವ್ಯದ ಲೋಪದೋಷಗಳನ್ನು ಎತ್ತಿ ತೋರಿಸಿದ್ದಾರೆ. ವಸ್ತು, ಭಾಷೆ, ಛಂದಸ್ಸು ಇವಾವುದರಲ್ಲೂ ಪರಿಶ್ರಮ, ಸಾಧನೆಯಿಲ್ಲದೆ ಅಗ್ಗದ ಕೀರ್ತಿಕಾಮನೆಯ ಏಕಮೇವ ಉದ್ದೇಶದಿಂದ ಪ್ರೇರಿತರಾಗಿ ಇಂದಿನವರು ನವ್ಯಕಾವ್ಯವನ್ನು ನಿರ್ಮಿಸುತ್ತಿದ್ದಾರೆಂದು ಆರೋಪಿಸಿದ್ದಾರೆ. 'ಕಾದಂಬರಿಗಳಲ್ಲಿ ಪಾತ್ರ ಪರಿಪೋಷಣೆ' ಎಂಬ ಪ್ರಬಂಧದಲ್ಲಿ ಸಾಹಿತ್ಯ ಪ್ರಕಾರಗಳಲ್ಲಿ ಕಾದಂಬರಿಗಿರುವ ಸ್ಥಾನ ಹಾಗೂ ಅದರಲ್ಲಿ ಪಾತ್ರ ಪರಿಪೋಷಣೆಯ ಮಹತ್ವವನ್ನು ಕುರಿತು ವಿವೇಚಿಸಿದ್ದಾರೆ. ಇದರಂತೆಯೇ 'ಕನ್ನಡ ಸಣ್ಣ ಕತೆಗಳ ಕಥೆ' ಪ್ರಬಂಧದಲ್ಲಿ ಕಥೆಯ ಪರಂಪರೆ, ಆಧುನಿಕ ಕಥೆಗಳ ಗುಣ ಸ್ವಭಾವ, ಸಣ್ಣ ಕತೆಗಾರನ ಶಕ್ತಿ-ಸಾಧನೆ, ಪ್ರಕಾಶನ ವ್ಯವಸಾಯಗಳ ವ್ಯವಹಾರ ದೃಷ್ಟಿ, ಸಾಹಿತ್ಯದಲ್ಲಿಯ ವಾದಗಳು ಮುಂತಾದ ವಿಷಯಗಳ ಕುರಿತು ವಿವೇಚಿಸಿದ್ದಾರೆ. 'ಸಾಮಾನ್ಯರ ಸಾಹಿತ್ಯದ ಸ್ವರೂಪ ದರ್ಶನ', 'ಜಾನಪದ ವಿನೋದ ವಿಲಾಸ', 'ಜಾನಪದ ಸುಖ ಸಂಕಥಾ ವಿನೋದ' ಹಾಗೂ 'ಕನ್ನಡ ಜನಪದ ಕಥಾಹಿನಿ' ಈ ನಾಲ್ಕೂ ಪ್ರಬಂಧಗಳು ಕನ್ನಡ ಜಾನಪದ ಸಾಹಿತ್ಯ ಕುರಿತಾದುವು. ಜಾನಪದ ಸಾಹಿತ್ಯದ ಪರಂಪರೆ, ರೂಪ, ಕನ್ನಡ ಜಾನಪದದಲ್ಲಿ ಹಾಸ್ಯ, ಒಗಟುಗಳು, ಜಾನಪದ ಕಥೆಗಳು ಮುಂತಾದವುಗಳನ್ನು ಈ ನಾಲ್ಕು ಪ್ರಬಂಧಗಳಲ್ಲಿ ಕೃಷ್ಣಶರ್ಮರು ನಿರರ್ಗಳವಾಗಿ ವಿವರಿಸಿದ್ದಾರೆ.

೧೯೬೧ ರಲ್ಲಿ ಪ್ರಕಟವಾದ 'ನಮ್ಮ ಸಂಸ್ಕೃತಿ ಪರಂಪರೆ' ಹದಿನೈದು ಪ್ರಬಂಧಗಳ ಸಂಕಲನ. ಚಾಂದ್ರಮಾನ ಸಂವತ್ಸರದ ಅವಧಿಯಲ್ಲಿಯ ವಿವಿಧ ಸಾಂಸ್ಕೃತಿಕ ಪರಂಪರೆ. ನಡಾವಳಿಗಳನ್ನು ಕುರಿತು ಬರೆದ ಹನ್ನೆರಡು ಪ್ರಬಂಧಗಳು ಈ ಸಂಕಲನದ ವೈಶಿಷ್ಟ್ಯ. ಚೈತ್ರಮಾಸದಿಂದ ಮೊದಲ್ಗೊಂಡು ಫಾಲ್ಗುಣವರೆಗೆ ಜರುಗುವ ಹಬ್ಬ-ಹರಿದಿನಗಳ ಹಿನ್ನೆಲೆ, ವಿಧಾನ ಹಾಗೂ ವೈಶಿಷ್ಟ್ಯಗಳ ಬಗ್ಗೆ ಸಂಪೂರ್ಣ ಮಾಹಿತಿ ಈ ಪ್ರಬಂಧಗಳಿಂದ ಸಿಗುತ್ತದೆ. ಈ ಸಂಕಲನದ ಉಳಿದ ಮೂರು ಪ್ರಬಂಧಗಳೆಂದರೆ 'ಕರ್ನಾಟಕದಲ್ಲಿ ವಸಂತೋತ್ಸವ', 'ಶಮೀ

ಸಂಕೇತ' ಮತ್ತು 'ನಾಡಹಬ್ಬ'. ಕರ್ನಾಟಕದಲ್ಲಿ ವಸಂತೋತ್ಸವದ', ಪ್ರಾಚೀನತೆ, ವ್ಯಾಪಕತೆಯ ಅರಿವನ್ನು ಮೂಡಿಸುತ್ತ ವಸಂತೋತ್ಸವದಲ್ಲಿಯ 'ಓಕಳಿ'ಯ ಸಂಪ್ರದಾಯ ಕುರಿತು ವಿವರಿಸಿದ್ದಾರೆ. 'ಶಮೀಸಂಕೇತ'ಪ್ರಬಂಧ ವಿಜಯ ದಶಮಿಯ ಬಗೆಗಿದೆ. ಬನ್ನಿ (ಶಮಿ) ಬಂಗಾರ ಹೇಗೆ ಆನ್ನಿಸಿಕೊಂಡಿತು? ಬನ್ನಿಗೆ ಇಷ್ಟೊಂದು ಮಹತ್ವವೇಕೆ? ಮುಂತಾದ ಸಹಜ ಪ್ರಶ್ನೆಗಳಿಗೆ ಇಲ್ಲಿ ಸಮರ್ಪಕ ಉತ್ತರಗಳಿವೆ. ಕೊನೆಯ ಪ್ರಬಂಧ 'ನಾಡಹಬ್ಬ'. ಕನ್ನಡಿಗರ ಚೇತನವನ್ನು ಬಡಿದೆಬ್ಬಿಸಿ ಅವರಲ್ಲಿಯ ಕರ್ತೃತ್ವ ಶಕ್ತಿಯನ್ನು ಜಾಗ್ರತಗೊಳಿಸಿದ ಹಬ್ಬವೆಂದರೆ ನಾಡಹಬ್ಬ. ಬಂಗಾಲಿಗಳು ದುರ್ಗಾಪೂಜಾ ಹಬ್ಬದಿಂದ, ಮರಾಠಿಗರು ಶಿವಾಜಿ ಜಯಂತಿ ಮತ್ತು ಗಣೇಶೋತ್ಸವದಿಂದ ಸ್ಫೂರ್ತಿ ಪಡೆದುಕೊಂಡು ತಮ್ಮತನವನ್ನು ಜಾಗ್ರತಗೊಳಿಸಿಕೊಂಡರೆ ಕರ್ನಾಟಕದ ಏಕೀಕರಣದ ಕನಸಂಕಂಡ ಹಿರಿಯರು ಜಾತಿ-ಮತಗಳ ಭೇದಭಾವನೆ ಇಲ್ಲದೆ ಕನ್ನಡಿಗರನ್ನು ಒಂದುಗೂಡಿಸುವ ಆಕರ್ಷಕ ಶಕ್ತಿ ಪಡೆದಿರುವ ನವರಾತ್ರಿ ಹಬ್ಬವನ್ನು ಕಾಯಕಲ್ಪ ಚಿಕಿತ್ಸೆಗೊಳಪಡಿಸಿ, ಕಾಲಕ್ಕೆ ತಕ್ಕಂತೆ ಹೊಸತನ ತುಂಬಿ 'ನಾಡಹಬ್ಬ'ವನ್ನಾಗಿಸಿರುವ ಚರಿತ್ರೆಯನ್ನು ಕೃಷ್ಣಶರ್ಮರು ಚನ್ನಾಗಿ ನಿರೂಪಿಸಿದ್ದಾರೆ. ನಾಡಹಬ್ಬದ ಮೂಲಕ ಕನ್ನಡನಾಡು, ನುಡಿ ಮತ್ತು ಸಂಸ್ಕೃತಿ ಕುರಿತು ಭಾಷಣ ಏರ್ಪಡಿಸುವದು, ಚರ್ಚೆ ನಡೆಸುವದು, ಹಾಡು ನಾಟಕಗಳನ್ನು ಸಂಘಟಿಸುವದು. ಮುಂತಾದ ಚಟುವಟಿಕಗಳ ಮೂಲಕ ತಾಯ್ನೆಲದ ಬಗ್ಗೆ ಅಭಿಮಾನ ಮೂಡಿಸುವದು ಈ ಹಬ್ಬದ ಉದ್ದೇಶಗಳು. ಸಂಸ್ಕೃತಿಕ ಪರಂಪರೆಗಳ ಬಗ್ಗೆ ಸಮಗ್ರ ಮಾಹಿತಿ ಸಿಗುವ ಈ ಪ್ರಬಂಧ ಸಂಕಲನಕ್ಕಾಗಿ ಕೃಷ್ಣಶರ್ಮರನ್ನು ಎಷ್ಟು ಹೊಗಳಿದರೂ ಸಾಲದು.

'ಸಾಹಿತ್ಯ ವಿಹಾರ' ೧೯೮೧ ರಲ್ಲಿ ಪ್ರಕಟವಾದ ಪ್ರಬಂಧ ಸಂಕಲನ ಕೃಷ್ಣಶರ್ಮರು ಆಗಾಗ ಪತ್ರಿಕೆಗಳಿಗೆ ಬರೆದ ಇಪ್ಪತ್ತೆರಡು ಪ್ರಬಂಧಗಳನ್ನು ನಾಲ್ಕು ವಿಹಾರಗಳಲ್ಲಿ ವಿಂಗಡಿಸಿದ್ದಾರೆ. 'ಕನ್ನಡಿಗರ ಅಡಿಗೆ-ಊಟ' ಮೊದಲನೆಯ ವಿಹಾರದಲ್ಲಿಯ ಮೊದಲನೆಯ ಪ್ರಬಂಧ. ಉತ್ತರ ಕರ್ನಾಟಕದಲ್ಲಿ ತಯಾರಿಸುವ ಮಹತ್ವದ ತಿನಿಸುಗಳ ಬಗ್ಗೆ ಮಾಹಿತಿಯಿದೆ. ಅದರಂತೆಯೇ ಮುಂದಿನ ಪ್ರಬಂಧ ಬಗೆ ಬಗೆಯ ಹೂವುಗಳ ಕುರಿತದ್ದು. 'ಕನಕದಾಸರ ಚಿತ್ರಿಸಿದ ಜನಜೀವನ' ವು ಕರ್ನಾಟಕದ ಜನರ ಜೀವನದ ರೀತಿನೀತಿಗಳನ್ನು ಕುರಿತದ್ದು. 'ಕನ್ನಡದಲ್ಲಿ ರಾಷ್ಟ್ರೀಯ ವಾಙ್ಮಯ' ರಾಷ್ಟ್ರೀಯ ಪ್ರಜ್ಞೆಯನ್ನು ವಿಶ್ಲೇಷಿಸುತ್ತದೆ. ಎರಡನೆಯ ವಿಹಾರ'ಕವಿ ದರ್ಶನ'. ಇದರಲ್ಲಿ 'ಕವಿ ಕುಮಾರವ್ಯಾಸನ ಕಾಲ ಚರಿತ್ರೆ' 'ಕನ್ನಡ ಭಾಗವತದ ಕರ್ತೃ ವಿಚಾರ', 'ಪುರಂದರದಾಸರ ಕೃತಿಗಳ ತುಲನಾತ್ಮಕ ಸಮೀಕ್ಷೆ', 'ಜಗನ್ನಾಥದಾಸರು', 'ಪಂಡಿತ ಮ. ಪ್ರ. ಪೂಜಾರ' ಮತ್ತು 'ಗಳಗನಾಥರ ಕೃತಿಗಳು' ಎಂಬ ಆರು ಪ್ರಬಂಧಗಳಿವೆ. ಮೂರನೆಯ ವಿಹಾರದಲ್ಲಿ, ಜಾನಪದಕ್ಕೆ ಸಂಬಂಧಿಸಿದ 'ಜಾನಪದ ನಾಟಕ ನಡೆದು ಬಂದ ದಾರಿ', 'ನಮ್ಮ ಜಾನಪದ ರಂಗಭೂಮಿ', 'ದೊಡ್ಡಾಟಗಳು', 'ಜಾನಪದ ನಾಟ್ಯಗೀತಗಳು' ಹಾಗೂ 'ಜಾನಪದ ಶಿಶು ಸಾಹಿತ್ಯ ಮತ್ತು ಲಾವಣಿ ಸಾಹಿತ್ಯ' ಎಂಬ ಐದು ಪ್ರಬಂಧಗಳಿವೆ. ಕೊನೆಯ ವಿಹಾರ 'ಸಂಸ್ಕೃತಿ ಸಂಚಯ'. ಇದರಲ್ಲಿ ನಮ್ಮ ಸಂಸ್ಕೃತಿಗೆಸಂಬಂಧಿಸಿದ 'ಜಾನಪದ ಸಂಸ್ಕೃತಿ', 'ನಮ್ಮ ಹಬ್ಬ ಹುಣ್ಣಿವೆಗಳು' 'ಕಾರಹುಣ್ಣಿವೆ', 'ಗುಡಿಯ ಹುಣ್ಣಿವೆ' ಮೊದಲಿನ ನಾಲ್ಕು ಪ್ರಬಂಧಗಳು. ಐದನೆಯ ಪ್ರಬಂಧ 'ಹಿಂದು ಮಹಿಳೆಯ ಬಾಳನೋಟ' ಹಿಂದೂ ಮಹಿಳೆಯ ಕನ್ಯಾ ಜೀವನವನ್ನು ವಿಶ್ಲೇಷಿಸುತ್ತದೆ. 'ಭಾರತೀಯ ತತ್ವ ವಿದುಷಿಯರು' ಪ್ರಬಂಧದಲ್ಲಿ ಗಾರ್ಗಿ ಮತ್ತು ಮೈತ್ರೇಯಿಯರ ವ್ಯಕ್ತಿತ್ವ ಪರಿಚಯವಿದೆ. 'ಪಂಚಾಣುವ್ರತಗಳು' ಕೊನಯ ಪ್ರಬಂಧ. ಅಹಿಂಸೆ, ಸತ್ಯ, ಆಚಾರ್ಯ, ಶೀಲ, ಅಪರಿಗ್ರಹ ಈ ವ್ರತಗಳ ಮಹಿಮೆ ಆಚರಣೆಯ ರೀತಿಗಳನ್ನು ಹೇಳಿ ಮಾನವತೆಯ ವಿಕಾಸಕ್ಕೆ, ನೆಮ್ಮದಿಗೆ ಇವು ಹೇಗೆ ಅತ್ಯಗತ್ಯವೆಂಬುದನ್ನು ಬಿಂಬಿಸಿದ್ದಾರೆ.

ಕಾವ್ಯ, ಕಥೆ, ಕಾದಂಬರಿ, ರೂಪಕ, ಪ್ರಬಂಧ ಮುಂತಾದ ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ಪಾಂಡಿತ್ಯಮಯ, ಪ್ರಭಾವಪೂರ್ಣ, ಅಧ್ಯಯನ ಯೋಗ್ಯ ಗ್ರಂಥಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ನೀಡಿದ ಕೃಷ್ಣಶರ್ಮರು ಸಾಹಿತ್ಯದಲ್ಲಿಯ ಒಂದು ಧ್ರುವತಾರೆ. ಅವರ ಪತ್ರಿಕಾ ಸೇವೆ ಹಾಗೂ ಜಾನಪದ ಕಾವ್ಯ ಸಂಪಾದನಾ ಕಾರ್ಯವೂ ಶ್ಲಾಘನೀಯವಾದುದು. ಈ ಲೇಖನವು ಕೇವಲ ಸೃಜನಾತ್ಮಕ ಕೃತಿಗಳನ್ನು ಮಾತ್ರ ಪರಿಚಯ ಮಾಡಿಕೊಡುವಂತೆ ಸೀಮಿತವಾಗಿದೆ. ಪರಿಚಯ ಎಷ್ಟಾದರೂ ಪರಿಚಯ ಮಾತ್ರ; ಮೂಲ ಕೃತಿಯನ್ನು ಓದಿದಾಗಲೇ ಸಂಪೂರ್ಣ ರಸಗ್ರಹಣ ಸಾಧ್ಯ.

● ●

ಸಂಗ್ರಹಕಾರರು :
ಶ್ರೀಮತಿ ಶಾರದಾ ಮುಲಶೆಟ್ಟಿ
ಕೃಷ್ಣಾ ಕುಲಕರ್ಣಿ

# ಆನಂದಕಂದರ ವಿಚಾರಧಾರೆ

"ಲೌಕಿಕ ಪ್ರಪಂಚದಲ್ಲಿ ನಾಯಕ ವ್ಯಕ್ತಿಗಳ ಸ್ವಾರ್ಥ-ಲೋಭಗಳು ಜನಸಾಮಾನ್ಯರಲ್ಲಿ ಪಕ್ಷ-ಪಂಗಡ ಗಳನ್ನು ನಿರ್ಮಿಸಿರುವಂತೆ, ಪಾರಮಾರ್ಥಿಕ ಪ್ರಪಂಚದಲ್ಲಿ ದೇವರ ಭಿನ್ನ ಭಿನ್ನ ನಾಮ, ಆಚಾರ್ಯರ ಭಿನ್ನ ಭಿನ್ನ ಮತ ಇವೂ ನಮ್ಮ ನಾಡಿನಲ್ಲಿ ಪಕ್ಷ ಪಂಗಡಗಳನ್ನು ಹುಟ್ಟಿಸಿ ಐಕ್ಯಶಕ್ತಿಯನ್ನು ಹದಗೆಡಿಸುತ್ತಲಿವೆ"

( ಮಲ್ಲಿಕಾರ್ಜುನ )

× × × × × ×

ವಿವಾಹವೆಂದರೆ ಅದೊಂದು ಪ್ರೇಮಪೂಜೆಯ ಪ್ರಾಸ್ತಾವಿಕ ಕಾರ್ಯ. ಇದಾದೊಡನೆಯೇ ದಂಪತಿ ಗಳು, ಒಬ್ಬರೊಬ್ಬರ ಪ್ರೇಮದಿಂದ ಒಬ್ಬರೊಬ್ಬರ ಪೂಜೆಗಟ್ಟಿ, ಇಹಲೋಕದಲ್ಲಿಯೇ ಶಾಂತಿ ಸೌಖ್ಯ ಗಳನ್ನು ಪಡೆಯುವರು. ಇದು ವಿವಾಹದ ಉದ್ದೇಶ, ಗುರಿ.

(ಸಂಸಾರ ಚಿತ್ರ)

× × × × × ×

ಮಾನವ ಲೋಕದ ಜೀವನಾನುಭವ. ಜೀವನ ಸೌಂದರ್ಯ ದೃಷ್ಟಿಗಳೇ ಪ್ರಧಾನ ಕಾರ್ಯಗಳಾಗಿರುವ ಸಾಹಿತ್ಯ ಸೃಷ್ಟಿ, ಬರಿ ನಾಗರಿಕ ಪ್ರಪಂಚಕ್ಕಷ್ಟೆ ಮೀಸ ಲಾದುದೇ ? ಮನಸ್ಸು-ಬುದ್ಧಿ-ಭಾವನೆಗಳು ಜಾಗೃತ ವಾಗಿರುವ ಸಾಮಾನ್ಯ ಮಾನವನೂ ಸಾಹಿತ್ಯವನ್ನು ಸೃಷ್ಟಿ ಸಬಲ್ಲ; ಅಂತಹ ಸಾಹಿತ್ಯದ ಶ್ರವಣಮನನಗಳಿಂದ ರಸ-ಭಾವನೆಗಳನ್ನು ಅನುಭವಿಸಬಲ್ಲ. ನಾಗರಿಕರಿಂದ ದೂರವಾಗಿದ್ದ ಜನಸಾಮಾನ್ಯರು. ತಮ್ಮ ಪ್ರಾದೇಶಿಕ ರೂಢಭಾಷೆಯಲ್ಲಿ ಸೃಷ್ಟಿಸಿದ ಗದ್ಯ-ಪದ್ಯ ಸಾಹಿತ್ಯವೂ ನಮ್ಮ ನಾಡಿನಲ್ಲಿ ಅಳತೆಗೆ ನಿಲುಕದ ಅಳತೆಯಲ್ಲಿಷ್ಟೆ-ಯಲ್ಲದೇ ಅದು ವಿವಿಧ ರೂಪದಲ್ಲಿಯೂ ಇದೆ.

(ಕನ್ನಡ ಜಾನಪದ ಸಾಹಿತ್ಯ)

× × × × × ×

"ಸಾಹಿತ್ಯವು ಇರುವಲ್ಲಿ ವಿಮರ್ಶೆಯೆಂಬುದೂ ಇರಲೇ ಬೇಕಾಗುತ್ತದೆ. ವಿಮರ್ಶೆಯನ್ನು ಕಾಣದ ಸಾಹಿತ್ಯ ತನ್ನ ನೆಲೆ-ಬೆಲೆಗಳನ್ನು ಸರಿಯಾಗಿ ಪ್ರಕಟಿಸದು. ಚಿನ್ನದ ಬಣ್ಣವನ್ನು ಕಂಡುಹಿಡಿದು ಅದರ ಪರಿಶುದ್ಧತೆ ಯನ್ನು ನಿರ್ಣಯಿಸುವುದು ಒರೆಗಲ್ಲು, ಹಾಗೆಯೇ ಸಾಹಿತ್ಯದ ಬಣ್ಣವನ್ನು ವಿಶ್ಲೇಷಿಸಿ ಅದರ ಪರಿಶುದ್ಧ ಸ್ವರೂಪವನ್ನು ನಿರ್ಣಯಿಸಿ ತೋರಿಸುವ ಸಾಧನವೆಂದರೆ ವಿಮರ್ಶೆ"

(ಸಾಹಿತ್ಯವು ಸಾಗಿರುವ ದಾರಿ)

× × × × × ×

"ಮಣಿಭೂಷಣಗಳು ಮಾನವನ ಬಹಿರಂಗದ ಸೌಂದರ್ಯವನ್ನು ಹೆಚ್ಚಿಸಬಲ್ಲುವಾದರೆ, ಸಾಹಿತ್ಯವು ಆತನ ಅಂತರಂಗದ ಸೌಂದರ್ಯವನ್ನು ಹೆಚ್ಚಿಸುವಂತಹದು. ಮಾನವನ ಮಾನವತೆ ಸಿದ್ಧವಾಗುವುದು ಅವನ ಬಹಿ ರಂಗದಸೌಂದರ್ಯದಿಂದಲ್ಲ, ಅಂತರಂಗ ಸೌಂದರ್ಯದಿಂದ"

(ಸಾಹಿತ್ಯವು ಸಾಗಿರುವ ದಾರಿ)

"ವಿಮರ್ಶೆಯು ಪ್ರಜ್ಞೆ ಕಾಲಕಾಲಕ್ಕೆ ಸಾಹಿತ್ಯಿಕನಲ್ಲಿ ನವನವೀನ ಸೌಂದರ್ಯದ ಕಲ್ಪನೆಗಳನ್ನು ಹುಟ್ಟಿಸಿ, ಅವುಗಳ ಪರಿಣಾಮ ಸಾಹಿತ್ಯ ಲೋಕದಲ್ಲಿ ಆಗುವಂತೆ ಮಾಡುವುದು."

(ಸಾಹಿತ್ಯವು ಸಾಗಿರುವ ದಾರಿ)

× × × × × ×

"ಬಾಹ್ಯಾಂಗಕ್ಕೆ ಬೇಕಾಗುವ ಆಹಾರ ಪದಾರ್ಥಗ ಳನ್ನು ಆಯ್ದುಕೊಳ್ಳುವ ಪ್ರಜ್ಞೆಯನ್ನು ಪ್ರತಿಯೊಬ್ಬನೂ ಪಡೆದಂತೆ, ತನ್ನ ಅಂತರಂಗಕ್ಕೆ ಬೇಕಾಗುವ ಸಾಹಿತ್ಯಾ ಹಾರವನ್ನು ಆಯ್ದುಕೊಳ್ಳುವ ಪ್ರಜ್ಞೆಯನ್ನು ಪ್ರತಿ ಯೊಬ್ಬನೂ ಪಡೆಯಲೇ ಬೇಕು. ಎಂದರೆ ಪ್ರತಿ ಯೊಬ್ಬನೂ ಸಾಹಿತ್ಯವಿಮರ್ಶಕ ಶಕ್ತಿಯನ್ನು ಬೆಳೆಸಿ ಕೊಳ್ಳಬೇಕು."

(ಸಾಹಿತ್ಯವು ಸಾಗಿರುವ ದಾರಿ)

× × × × × ×

"ವಿಮರ್ಶಕನ ತಲೆಯ ಮೇಲಿರುವ ಹೊಣೆಗಾರಿಕೆ ತುಂಬ ಘನವಾದುದು. ಅದಕ್ಕಾಗಿ ಈತ ಸಕಲ ವಿಷಯ ಪರಿಣತನೂ ಲೋಕಾನುಭವಿಯೂ ಬಹುಶ್ರುತನೂ ಇರಬೇಕಲ್ಲದೆ. ಯೋಗ-ಯುಕ್ತ ಮನಸ್ಸಿನವನೂ ಸಮತೂಕದ ಬುದ್ಧಿಯವನೂ ಆಗಿರಬೇಕು. ಪೂರ್ವ ಗ್ರಹ, ಪಕ್ಷಪಾತ, ದ್ವೇಷ-ಮತ್ಸರ ಸಾಧನೆ–ಇವುಗಳಿಂದ ಸಂಪೂರ್ಣ ಅಲಿಪ್ತನಾಗಿರಬೇಕು"

(ಸಾಹಿತ್ಯವು ಸಾಗಿರುವ ದಾರಿ)

× × × × × ×

"ವಿಮರ್ಶೆ ವಿವೇಚನೆ, ವಿವರಣೆ, ಯುಕ್ತಿ ಪ್ರಮಾಣಗಳಿಂದ ಕೂಡಿರಬೇಕು. ಅದು ನಿರ್ಮಾತೃವಿಗೆ ಹೊಸ ದೃಷ್ಟಿಯನ್ನು ಕೊಡುವ ಪಾಠವಾಗಿ ಕಾಣಬೇಕೇ ಹೊರತು ನಿಂದೆ–ವಿಡಂಬನೆ–ವ್ಯಂಗ್ಯ ವಚನಗಳ ಶಬ್ದಜಾಲವಾಗಿ ಪರಿಣಮಿಸಬಾರದು"

(ಸಾಹಿತ್ಯವು ಸಾಗಿರುವ ದಾರಿ)

× × × × × ×

"ಸತ್ಯದ ಸಂಶೋಧನವೇ ಸಾಹಿತ್ಯದ ತಳಹದಿ; ಸತ್ಯದ ದರ್ಶನವೇ ಅವರ ಆದರ್ಶ."

(ಸಾಹಿತ್ಯವು ಸಾಗಿರುವ ದಾರಿ)

× × × × × ×

"'ಅಶ್ಲೀಲತೆ' ಎಂಬ ಮಾತಿನಲ್ಲಿ ಹೊರಡುವ ಇಂದಿನ ಮುಖ್ಯವಾದ ಅರ್ಥವೆಂದರೆ ವ್ಯಕ್ತಿಯಲ್ಲಿ ಅಥವಾ ಸಾಮಾನ್ಯ ಜನಸಮೂಹದಲ್ಲಿ ಕಾಮವನ್ನು ಕೆರಳಿಸಿ ಮನಸ್ಸನ್ನು ವಿಕೃತಿಗೆ ಗುರಿಮಾಡುವಂತಹ ನಡೆ-ನುಡಿಗಳು-ಎಂದು. ನಡೆವಳಿಯಲ್ಲಿ ನುಡಿವಳಿಯಲ್ಲಿ ಈ ಅಶ್ಲೀಲತೆಯು ಅಭಿವ್ಯಕ್ತವಾಗಬಾರದೆಂಬುದು ಸುಸಂಸ್ಕೃತ ಸಮಾಜದಲ್ಲಿ ನಡೆದುಕೊಂಡು ಬಂದ ಸಂಪ್ರದಾಯ"

(ಸಾಹಿತ್ಯವು ಸಾಗಿರುವ ದಾರಿ)

× × × × × ×

ಇಂದಿನ ವೈಜ್ಞಾನಿಕ ಯುಗದಲ್ಲಿ ನಮ್ಮ ಪರಂಪರಾಗತವಾದ ಭಾವನಾಗಮ್ಯ ಕಲ್ಪನಾರಮ್ಯ, ಸ್ವಾನುಭವರಹಿತವಾದ ಸಾಹಿತ್ಯದ ಸ್ಥಾನಮಾನಗಳು ಕಡಿಮೆಯಾಗುತ್ತ ಹೊರಟಿವೆ. ದೇವರು-ಧರ್ಮ, ಪಾಪ-ಪುಣ್ಯ, ಸ್ವರ್ಗ-ನರಕ, ಐಹಿಕ-ಆಮುಷ್ಮಿಕ, ದೇವ-ದೈತ್ಯ, ವಿಭೂತಿ-ಅವತಾರ, ದೇವ-ಪುರಾಕೃತ, ಜಾತಿ-ಕುಲ, ಮತ-ಪಂಥ, ಜಪ-ತಪ, ವೇದ-ಪುರಾಣ, —ಇವೆಲ್ಲ ಮಾತುಗಳು, ತಮ್ಮಲ್ಲಿದ್ದ ಶಕ್ತಿ-ಸತ್ವಗಳನ್ನು ಕಳೆದುಕೊಂಡು. ಅರ್ಥಶೂನ್ಯ ಪದಗಳೆಂದು ಪರಿಗಣನೆಗೆ ಒಳಗಾಗುತ್ತಲಿವೆ."

(ಕನ್ನಡ ಜಾನಪದ ಸಾಹಿತ್ಯ)

× × × × × ×

ಭಾರತದಲ್ಲಿ ಅನೇಕ ಆಸ್ತಿಕ ಮತ-ಪಂಥಗಳು ಹುಟ್ಟಿ ಬೆಳೆದು ಅಸ್ತಿತ್ವದಲ್ಲಿ ಇವೆ ಇವೆಲ್ಲ ದೈವನಾದವನ್ನು ಒಪ್ಪಿಕೊಂಡಿದ್ದರೂ, ಮಾನವೀಯ ಜೀವನದ ಸುಖ, ಶಾಂತಿ, ಪುಷ್ಟಿಗಳ ಸಾಧನೆಗೆ ವಿಮುಖವಾಗಿ ನಿಂತುದರಿಂದಲೂ, ಸತ್ಯ ಸಿದ್ಧಾಂತಗಳಲ್ಲಿ ಏಕವಾಕ್ಯತೆ ಕಂಡುಬಾರದುದರಿಂದಲೂ, ಆ ಮತ-ಪಂಥಗಳ ವಿಷಯಕವಾಗಿದ್ದ ಶ್ರದ್ಧೆಯ ಬೇರುಗಳು ಸಡಿಲುಗೊಳ್ಳುತ್ತ ಬಂದುವು.

(ಕನ್ನಡ ಜಾನಪದ ಸಾಹಿತ್ಯ)

× × × × × × ×

ಸೌಂದರ್ಯವೆಂಬುದು ಸಮಯೋಗ; ಜೀವನದ ಒಂದು ರಸಾವಸ್ಥೆ, ಜೀವನವೆಂಬುದು ಆ ರಸಾವಸ್ಥೆಯನ್ನು ಹುಡುಕುತ್ತಲಿರುವ ವಿಕ್ಷೇಪಭಾವದ ಅವಸ್ಥೆ. ವೈದ್ಯ ರಸೌಷಧಿಯನ್ನು ಸಿದ್ಧಗೊಳಿಸಲು ಹವಣಿಸಿ, ಬೇರೆ ಬೇರೆ ವನಸ್ಪತಿಗಳನ್ನೂ ರಸಪದಾರ್ಥಗಳನ್ನೂ ಶೇಖರಿಸುತ್ತಾನೆ. ಅವುಗಳನ್ನು ಖಲನೆಯಿಂದಲೂ ಉಷ್ಣತೆಯಿಂದಲೂ ಸಂಯೋಗಗೊಳಿಸಿ, ರಸಯೋಗವನ್ನು ಪಾಕಕ್ಕೆ ಇಳಿಸುತ್ತಾನೆ. ಈ ಯೋಗದ ಸಲಕರಣೆಯನ್ನು ಕೂಡಿಸುವ ಕಾರ್ಯವೂ ಖಲನ–ಜ್ವಲನ ಕಾರ್ಯಗಳೂ ಜೀವನವೆನಿಸುವವು. ಪಾಕದಿಂದಾದ ರಸಸಿದ್ಧಿ ಸೌಂದರ್ಯವೆನಿಸುವದು. ನಾವು ಜೀವನ ಸಾಧನೆಯಿಂದ ಸೌಂದರ್ಯವನ್ನು ಸಿದ್ಧಿಸಿಕೊಳ್ಳಬೇಕಾಗುವದು. ಸೌಂದರ್ಯ ಸಿದ್ಧಿಯಿಂದ ಜೀವನದ ಅಪಕ್ವತೆಯನ್ನು ಪರಿಪಕ್ವಗೊಳಿಸಿಕೊಳ್ಳಬಹುದು. ಇವು ಒಂದಕ್ಕೊಂದು ಸಾಧಕವಾಗಿವೆ ಹೊರತು ಬಾಧಕವಾಗಿಲ್ಲವೆಂಬ ಅನಭವ ಸತ್ಯವನ್ನೂ ನಮ್ಮ ಜನ ಮನಗಾಣಿಸಿಕೊಳ್ಳಬೇಕು.

(ಜನಪದ ಜೀವನ.)

× × × × × × ×

ಸಂಪ್ರದಾಯ-ಪ್ರಗತಿಶೀಲತೆಗಳ ವಾದವೂ ಹಂರ ಭಿನ್ನ [illegible] ಇರುವು ನಮ್ಮಲ್ಲಿ ಮಾಡಬೇಕಾದಂದರ ಆ ಗತ್ಯ ತುಂಬ ಇದೆ. ಪೂರ್ವಜರ ಪ್ರಗತಿಯ ಸಾಧನೆಯು ಮಾರ್ಗಕ್ರಮವು ಪದ್ಧತಿಯು ಇಂದಿನವರೆಗೆ ಸಂಪ್ರದಾಯ ವಾಗಿ, ತೋರುವದಿಷ್ಟೆ ಇಂದಿನವರ ಪ್ರಗತಿಶೀಲತೆಯ ರೀತಿ-ನೀತಿಗಳು ಮುಂದಿನವರಿಗೆ ಸಂಪ್ರದಾಯವಾಗಿ ತೋರಿವರೆ ಅದಲ್ಲಿ ಆಶ್ಚರ್ಯ ಪಡಬೇಕಾದುದೇನೂ ಇಲ್ಲ. ಸಂಪ್ರದಾಯವೆಂದರೆ ತಂತಮ್ಮ ಜೀವನದಲ್ಲಿ ಕಂಡುಬಂದ ಅನುಭವಜ್ಞಾನವನ್ನು ಪರಂಪರೆಯಾಗಿ ಕೊಡುತ್ತಾ ಹೋಗುವದು.

(ಜನಪದ ಜೀವನ)

× × × × × ×

ವ್ಯಕ್ತಿ ಸ್ವಾತಂತ್ರ್ಯ-ಸಮಾಜ ಕಲ್ಯಾಣಗಳು ಬಾಳಿನ ಉಸಿರಾಗಿದ್ದ ನಮ್ಮ ಜನಪದದಲ್ಲಿ, ಇಂದು ಅವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ ವ್ಯಕ್ತಿಗಳ ಸಂಖ್ಯೆ ತೀರ ಕಡಿಮೆಯಾಗಿದೆ. ಇದೆಲ್ಲ ಪರಿಸ್ಥಿತಿಯ ಪ್ರಭಾವವೇ ಹೊರತು ನಮ್ಮ ಜನತೆ ಕೆಟ್ಟುದಲ್ಲ. ಒಳ್ಳೆಯ ಪರಿಸ್ಥಿತಿ ಯನ್ನು ಒದಗಿಸಿದಲ್ಲಿ ಎಲ್ಲರೂ ಮಾನವತೆಯ ಗುರಿಯನ್ನು ಸರಿಯಾಗಿ ಕಂಡುಕೊಳ್ಳಬಹುದು. ಅಂತಹ ಪರಿಸ್ಥಿತಿ ಯನ್ನು ಒದಗಿಸಲಿಕ್ಕೆ ಸರಕಾರದ ಕಟ್ಟು-ಕಟ್ಟಳೆಗಳು ಸಮರ್ಥವಾಗಲಾರವು. ಬರಿ ಹೊಟ್ಟೆ ತುಂಬ ಅನ್ನ, ಮೈ ತುಂಬ ಬಟ್ಟೆ ಒದಗಿಸಿಕೊಡಬಲ್ಲ ಆರ್ಥಿಕ ಸಮತೆಯೂ ಸಮರ್ಥವಾಗಲಾರದು. ವ್ಯಕ್ತಿಯ ಹೃದಯದ ಅರಳಿ ಕೆಯು ಇಲ್ಲದಲ್ಲಿ ಯಾವ ಉಪಾಯವೂ ಸಮಾಜ ಕಲ್ಯಾಣ ವನ್ನು ಸಾಧಿಸಲಾರದು.

(ಜನಪದ ಜೀವನ)

× × × × × ×

ವ್ಯಕ್ತಿಗಳ ಹೃದಯಗಳನ್ನು ಅರಳಿಸಿ ಅಲ್ಲಿ ಸಂಸ್ಕಾರದ ಸುಗಂಧವನ್ನು ನೀಡುವದಕ್ಕೆ ಮುಖ್ಯ ಸಾಧನವೆಂದರೆ ಸಾಹಿತ್ಯ.

(ಜನಪದ ಜೀವನ)

× × × × × ×

"ಯಾವ ದೇಶ-ಕಾಲಗಳಲ್ಲಿಯೂ ಯಾವುದೇ ವ್ಯಕ್ತಿಯ ದುಷ್ಟವೃತ್ತಿಯನ್ನು ನಿಗ್ರಹಿಸುವ ಕಾರ್ಯ ಮಾಡುವ ಪ್ರಮುಖ ವ್ಯಕ್ತಿಯೆಂದರೆ ಸಾಹಿತಿಕ; ಪ್ರಮುಖ ಸಾಧನವೆಂದರೆ ಅವನು ನಿರ್ಮಿಸಿದ ಸಾಹಿತ್ಯ"

(ಸಾಹಿತ್ಯವು ಸಾಗಿರುವ ದಾರಿ)

× × × × × ×

"ಸುಸಂಸ್ಕೃತ ಜೀವಿಯ ಕಾಮ, ಸಂಸ್ಕಾರಕ್ಕನು ಗುಣವಾದ ಪ್ರತಿಲಿಂಗಿಯನ್ನು ಆಯ್ದು ಸಂಯಮ ಮಾರ್ಗದಲ್ಲಿ ನಡೆಯಲು ಬಯಸುವ ಕಾಮದ ಆಕ ರ್ಷಣೆ-ಸಂವೇದನೆಗಳು 'ಪ್ರಣಯ' ಎಂದು ಹೆಸರನ್ನು ಪಡೆದಿರುವವು."

(ಸಾಹಿತ್ಯವು ಸಾಗಿರುವ ದಾರಿ)

× × × × × ×

"ವೈಯಕ್ತಿಕ ಆನಂದ, ಸಾಮೂಹಿಕ ಶಾಂತಿ ಇವೆರಡನ್ನೂ ಸಾಧಿಸಬೇಕೆಂಬ ಮಾನವನ ಪ್ರಯತ್ನವೇ ಗಂಡು ಹೆಣ್ಣನ್ನು ವಿವಾಹದ ಬಂಧನದಲ್ಲಿ ಬಿಗಿಯ ಬೇಕೆಂದು ನಿರ್ಣಯಿಸಿತು."

(ಸಾಹಿತ್ಯವು ಸಾಗಿರುವ ದಾರಿ)

× × × × × × ×

"ಯಾವುದೇ ಒಂದು ನಾಡು ಅಭ್ಯುದಯದ ಶಿಖರ ಕ್ಕೇರಿ ಜನತೆಯಲ್ಲಿ ಶಾಂತಿ-ಪುಷ್ಟಿ-ತುಷ್ಟಿಗಳು ನೆಲೆಗೊಂಡು ನಿಲ್ಲಬೇಕಾದರೆ ಅಲ್ಲಿ ನಾಲ್ಕು ಶಕ್ತಿಗಳ ಜಾಗೃತ ಉಪಾಸನೆ ಎಡೆಬಿಡದೆ ನಡೆಯುತ್ತಿರಬೇಕು. ವಿದ್ಯಾಶಕ್ತಿ, ಜೀವ ನಿಯಮನ ಶಕ್ತಿ, ಸಂಪತ್ ಶಕ್ತಿ ಮತ್ತು ಕಾರ್ಯಶಕ್ತಿ ಇವೇ ಆ ನಾಲ್ಕು ಶಕ್ತಿಗಳು."

(ನಮ್ಮ ಸಂಸ್ಕೃತಿ ಪರಂಪರೆ)

× × × × × × ×

"ಐತಿಹಾಸಿಕ ಕಾದಂಬರಿಯೆಂದರೆ, ಬರೀ ರಂಜ ಕತೆ ಅದ್ಭುತ ರಮ್ಯತೆಗಳ ಕಂತೆ ಪುರಾಣಗಳೆನಿಸಿಕೊಳ್ಳ ಬಾರದು. ಆ ಆ ಘಟನೆಗಳು ಜರುಗಿದ ದೇಶ, ಕಾಲ, ಜೀವನ ಪರಿಸ್ಥಿತಿಗಳ ಸಹಜ ರೂಪಕವೇ ಐತಿಹಾಸಿಕ ಕಾದಂಬರಿಯೆನಿಸಿಕೊಳ್ಳುವುದು. ಇಂತಹ ಕಾದಂಬರಿಗಳ

ನಿರ್ಮಿತಿಗೆ ಲೇಖಕನ ಇತಿಹಾಸ ಸಂಸ್ಕೃತಿ ಜನಜೀವನ ವಿಶಿಷ್ಟವಾದ ಅಭ್ಯಾಸವೇ ಸಹಕಾರಿಯಾಗಿ ನಿಲ್ಲಬೇಕು. ಇದಿಲ್ಲದೆ ಬರೆದ ಐತಿಹಾಸಿಕ ಕಾದಂಬರಿಗಳು ಆಭಾಸಾತ್ಮಕ ಕೃತಿಗಳು. ನೈಜ ಕಲಾಕಾಂಕ್ಷಿಗಳ ಮನಸ್ಸು ಬುದ್ಧಿಗಳನ್ನವು ಎಂದೂ ಆಕರ್ಷಿಸಲಾರವು."

(ರಾಜಯೋಗಿ)

× × × × × ×

"ಮಾನವನ ಆಶೆಯನ್ನು ಆಟವಾಡಿಸುವುದಕ್ಕಾಗಿ ನಿಸರ್ಗವು ಕಣ್ಣುಮನಗಳನ್ನೆಳೆಯುವ ಮೋಹಕವಾದ ಹಲವು ಬಲೆಗಳನ್ನು ಹರಡಿ ಇಟ್ಟಿರುವುದು. ಒಂದು ಬಲೆಯಲ್ಲಿ ಸಿಲುಕಿ ತೊಡಕಾಗುತ್ತಿರುವಾಗಲೆ ಇನ್ನೊಂದು ಬಲೆಯ ಸೊಬಗನ್ನು ಕಾಣುವುದು ಮನಸ್ಸು; ಮೊದಲಿನ ಬಲೆಯೊಡನೆ ಅದರೊಳಕ್ಕೆ ಹಾರಲು ಹವಣಿಸುವುದು. ಹಾಗೆಯೆ ದಾರಿ ಇನ್ನೊಂದು ತೊಡಕನ್ನು ಮೈಗೆ ಸುತ್ತಿಕೊಳ್ಳುವುದು. ಹೀಗೆ ಮನಸ್ಸು ಅತೃಪ್ತಿ-ಅಶಾಂತಿಗಳ ಆವಾಸವಾಗಿಬಿಡುವುದು"

(ರಾಜಯೋಗಿ)

× × × × × ×

ಸಮಾಜ ಜೀವನದಲ್ಲಿ ಸಾಮರಸ್ಯ-ಸುಖ-ಸಂತೃಪ್ತಿಗಳನ್ನು ಬಯಸುವವರು ಮೊದಲ ಮೆಟ್ಟಿಲಾಗಿ ತಮ್ಮ ತಮ್ಮ ಕೌಟುಂಬಿಕ ಜೀವನದಲ್ಲಿ ಅದಕ್ಕೆ ಅಗತ್ಯವಾದ ರೀತಿ ನೀತಿಗಳನ್ನು ಅಳವಡಿಸಿಕೊಳ್ಳಬೇಕಲ್ಲವೇ ? ಅದಕ್ಕಾಗಿಯೇ ಕುಟುಂಬ ಜೀವನದಲ್ಲಿ ಪ್ರಧಾನ ಘಟಕವಾದ ದಾಂಪತ್ಯ ಜೀವನವು ಸುನೀತಿ ಸುಗುಣಗಳಿಂದ ಬಿಗಿವಡೆಯಬೇಕೆಂಬುದು ನಮ್ಮ ನಾಡವರ ಹಿರಿಯ ಬಯಕೆ.

(ಕನ್ನಡ ಜಾನಪದ ಸಾಹಿತ್ಯ)

× × × × × ×

ಗಂಡು-ಹೆಣ್ಣಿನ ದಾಂಪತ್ಯ ಜೀವನದ ಆದರ್ಶ ಸಿದ್ಧಿಯೆಂದರೆ, ಅವರವರ ಮನಸ್ಸು. ಹೃದಯಭಾವಗಳ ಸಾಮರಸ್ಯ ಸಂತೃಪ್ತಿಗಳಿಂದ ತುಂಬಿನಿಂತುದು. ಇಂತಹ ಸಾಮರಸ್ಯ ಸಂತೃಪ್ತಿಗಳಿಗೆ ಎಡೆಯಿಲ್ಲದ ದಾಂಪತ್ಯ ಜೀವನ, ವಿಷಮತೆಯ ವಿಷಸೃಷ್ಟಿಗೆ ಕಾರಣವಾಗಿ ಹೆಣ್ಣು ಗಂಡುಗಳ ಬಾಳನ್ನೆಲ್ಲ ಹಾಳುಮಾಡಿ ಬಿಡುವದು.

(ಕನ್ನಡ ಜಾನಪದ ಸಾಹಿತ್ಯ)

ತಾಯಿಯಾದವಳಿಗೆ ಹೆಣ್ಣಾದರೂ ಸರಿಯೆ-ಗಂಡಾದರೂ ಸರಿಯೆ; ಎರಡೂ ಅವಳ ಕರುಳ ಬಳ್ಳಿ. ಎರಡರಲ್ಲಿಯೂ ಸಮಾನ ವಾತ್ಸಲ್ಯ! ಇಬ್ಬಗೆಯ ಸಂತಾನದ ಶುಭ ಭವಿಷ್ಯವನ್ನು ಬಯಸುವದು ತಾಯ್ತನದ ಸಹಜ ಸ್ವಭಾವ.

(ಕನ್ನಡ ಜಾನಪದ ಸಾಹಿತ್ಯ)

卐 × × × × ×

ಕತೆಗಾರನ ಜನಜೀವನ ದರ್ಶನ, ಆದರ್ಶದಿಂದ ಉಂಟಾಗುವ ಭಾವಸಂವೇದನೆ ಕಥನಕಲೆಯ ಸಿದ್ಧಿ, ದೇಶ ಕಾಲೋಚಿತ ಭಾಷಾಶೈಲಿ ಇವೆಲ್ಲವುಗಳ ಸಮೀಚೀನ ಸಂಯೋಗದಿಂದ ಉತ್ತಮ ಕಥಾಸಾಹಿತ್ಯದ ನಿರ್ಮಿತಿಯಾಗುವದು.

(ಕಳ್ಳರಗುರು)

× × × × × ×

"ಹಾವಿನಂತಹ ದುಷ್ಟಜಂತುವು ಕೆಣಕದೆ ಯಾರನ್ನೂ ಹಿಂಸಿಸದು. ಮನುಷ್ಯ ! ಮನುಷ್ಯ ಸುಮ್ಮಗೆ ಬಿಡುವನೆ? ಅವನ ಆಶೆಯೆ ಹಾವು, ಯಾರೂ ಕೆಣಕದಿದ್ದರೂ-ಎಲ್ಲರನ್ನೂ ಕಡಿಯುವುದು; ಕಳ್ಳನನ್ನು ಮೊದಲು ಮಾಡಿ ಸಾಮ್ರಾಟನವರೆಗೆ ಎಲ್ಲರಿಗೂ ಆಶೆ ! ಎಲ್ಲರಿಗೂ ಸ್ವಾರ್ಥಲೋಭ !

(ಕಳ್ಳರಗುರು)

× × × × × ×

ಮಾನವ ಜೀವನದಲ್ಲಿ ತಲೆಕೆಳಗಿನ ವ್ಯವಹಾರವೇ ಹೆಚ್ಚಾಗಿ ಕಂಡುಬರುವದು. ಬದುಕಬೇಕೆನ್ನುವವರಿಗೆ ಸಾವು ಬೆನ್ನಟ್ಟಿರುತ್ತದೆ; ಸಾವು ಬೇಕೆನ್ನುವವರನ್ನು ಜಗತ್ತು ಬಿಗಿಹಿಡಿದು ಕಟ್ಟಿರುತ್ತದೆ.

(ಕಳ್ಳರಗುರು)

× × × × × × ×

ತರುಣ-ತರುಣಿಯರ ಸ್ವಭಾವ ಸಹಜ ಆಕರ್ಷಣೆ, 'ಪ್ರೀತಿ' ಎಂಬ ಪವಿತ್ರ ಹೆಸರಿಗೆ ಪಾತ್ರವಾದೀತೆ ? ಬುದ್ಧಿ-ಹೃದಯಗಳ ಚೆಲುವಿಕೆಯಿಲ್ಲದ ಬರಿ ಬಹಿರಂಗ ಸೌಂದರ್ಯ, ಹೆಣ್ಣು-ಗಂಡುಗಳ ಪ್ರೀತಿಗೆ ಪೋಷಕ ಸಾಮಗ್ರಿಯಾದೀತೆ ? ಅಂತಹ ಆಭಾಸ ಸೌಂದರ್ಯ, ಪ್ರೀತಿಜೀವನವನ್ನು ಶಾಶ್ವತಗೊಳಿಸೀತೆ ? ಇದಾವುದರ

ಪೂರ್ವಯೋಜನೆಯೂ ಇಲ್ಲದೆ, ಪತಂಗಗಳು ದೀಪದ ಬಣ್ಣಕ್ಕೆ ಮೋಹಿಸಿ ಮೈ ಸುಟ್ಟುಕೊಂಡು ಮರುಗುವುದು ಎಲ್ಲೆಲ್ಲಿಯೂ ನಡೆದೇ ಇದೆ

(ಕಳ್ಳ ರಗಳು)

× × × × × ×

ಕಥೆಯು ಸ್ಥಳ-ಕಾಲ-ಪಾತ್ರಗಳ ಕಲ್ಪನೆಯನ್ನು ಪೂರ್ತಿಯಾಗಿ ಮಾಡಿಕೊಂಡು. ಅವುಗಳಿಗೆ ಅನುಗುಣ ವಾದ ದೇಶಿಗಳನ್ನು ಬಳಸಿದರೆಯೆ ಕಥೆಯು ಹೆಚ್ಚು ವಾಸ್ತವವೆನಿಸುವದು; ಆ ವಾಸ್ತವತೆಯೇ ನಿಜವಾದ ಸೌಂದರ್ಯ ಸಿದ್ಧಿಗೆ ಕಾರಣವಾಗುವದು.

(ಜನಪದ ಜೀವನ)

× × × × × × ×

ಮಾನವನ ಕನಸುಗಳು ಆತನ ಅಭಿರುಚಿ ಸಂಸ್ಕೃತಿ ಗಳನ್ನು ತಿಳಿಸುವ ಮುಖ್ಯ ಸಾಧನಗಳು.

(ಜನಪದ ಜೀವನ)

× × × × × ×

'ನೆತ್ತರ ಕೊಡುಗೆ' ಎಂದರೆ ರಕ್ತದ ದಾನವಲ್ಲ; ರಕ್ತದ ದಾನಕ್ಕಾಗಿ ಪಡೆದ ಉಂಬಳಿ. ಕನ್ನಡ ನಾಡಿನ ಪೂರ್ವದ ಚರಿತ್ರೆಯಲ್ಲಿ, ನೆತ್ತರ ಕೊಡುಗೆಯ ಉಂಬಳಿ ಯನ್ನು ಪಡೆದ ಬಂಟರ ಹೆಸರು ಹಲವಾರು ಕಂಡು ಬರುವವು. ಹೆಸರಿಲ್ಲದೇ ಕಾಲದ ತೆರೆಯಲ್ಲಿ ಮರೆಯಾದ ಕನ್ನಡ ಬಂಟರಿಗೆ ಲೆಕ್ಕವೇ ಇಲ್ಲ. ಇದೊಂದು ನಮ್ಮ ನಾಡಿನ ವೈಶಿಷ್ಟ್ಯ. ಶೋಧಕ ಬುದ್ಧಿಯನ್ನು ಹದನು ಗೊಳಿಸಿಕೊಂಡು ಮರವೆಯ ಪರದೆಗಳನ್ನು ಹರಿದು ಓದುತ್ತ ಹೋದರೆ, ನೆತ್ತರ ಕೊಡುಗೆಯನ್ನು ಪಡೆದ ಕನ್ನಡ ಬಂಟರ ಪವಾಡವನ್ನು ಬರೆದುಕೊಂಡ ಇತಿ ಹಾಸದ ಪುಟಗಳು ಬೇಕಾದಷ್ಟು ದೊರೆಯುವವು. ನೋಡುವ ಶಕ್ತಿಯನ್ನು ಸಂಪಾದಿಸಿದ ಒಳಗಣ್ಣು ಮಾತ್ರ ಬೇಕು ನಮಗೆ.

(ಜನಪದ ಜೀವನ)

× × × × × ×

"ಸಾಹಿತ್ಯದ ಅವತಾರವಾದುದು ನಾಗರಿಕತೆಯ ಅವತಾರಕ್ಕಿಂತ ತೀರ ಹಿಂದಣ ಕಾಲದಲ್ಲಿ. ಏಕೆಂದರೆ ಸಾಹಿತ್ಯವೆಂಬುದು ಮಾನವನ ಅಂತಃಸ್ವರೂಪದ ಪ್ರತಿ ಚ್ಛಾಯೆ. ನಾಗರಿಕತೆಯೆಂಬುದು ಮಾನವನೇ ತನಗಾಗಿ ನಿರ್ಮಿಸಿಕೊಂಡ ಬಾಹ್ಯಾಂಗದ ವೇಷಭೂಷಣಗಳು ಆದುದರಿಂದಲೇ ಮಾನವನಿಗೂ ಸಾಹಿತ್ಯಕ್ಕೂ ತ್ರಿಕಾಲಾ ಬಾಧಿತವಾದ ಅನಿವಾರ್ಯ ಸಂಬಂಧವಿದೆಯೆಂದು ಹೇಳ ಬಹುದು"

(ಸಾಹಿತ್ಯವು ಸಾಗಿರುವ ದಾರಿ)

× × × × × ×

"ಸಾಹಿತ್ಯದ ಮೂಲ ಸ್ವರೂಪ ಮಾನವ ಪ್ರಪಂಚ ದಲ್ಲೆಲ್ಲ ಒಂದೇ ಬಗೆಯದಾಗಿರುವುದು. ಏಕೆಂದರೆ ಮಾನ ವನ ಸ್ವಾಭಾವಿಕ ಬೇಕು-ಬೇಡಗಳೆಲ್ಲ ಎಲ್ಲ ದೇಶದಲ್ಲಿಯೂ ಎಲ್ಲ ಕಾಲದಲ್ಲಿಯೂ ಒಂದೇ ಬಗೆಯವಾಗಿರುವುವು. ಆಸಕ್ತಿ, ಉತ್ಸಾಹ, ದುಃಖ, ಕೋಪ, ಭೀತಿ, ನಗೆ, ಆಶ್ಚರ್ಯ, ಜಿಗುಪ್ಸೆ ಮೊದಲಾದ ಆತನ ಮನಸ್ಸಂವೇ ದನೆಗಳು--ಎಲ್ಲ ದೇಶ--ಕಾಲಗಳಲ್ಲಿಯೂ ಒಂದೇ ಬಗೆಯ ಗುಣಧರ್ಮದುವು ಆಗಿರುವುವಲ್ಲವೇ ? ಮಾನವನ ಈ ಮೂಲ ಸಂವೇದನೆಗಳಿಗೆ ಆಲಂಬಕ, ಉದ್ದೀಪಕಗಳಾಗಿ ದೇಶ-ಕಾಲಾನುಗುಣವಾದ ಬೇರೆ ಬೇರೆ ಕಾರಣಗಳು ಇರ ಬಹುದು, ಅಷ್ಟೆ! ಪ್ರಪಂಚದಲ್ಲಿ ನಾಗರಿಕತೆ ಬೆಳೆಯ ತೊಡಗಿದಂತೆ ಸಾಹಿತ್ಯಕ್ಕೆ ಅದರಿಂದ ವಿವಿಧ ಮುಖ ವಾದ ಆಲಂಬಕ-ಉದ್ದೀಪಕ ಸಾಧನೆಗಳು ದೊರೆಯ ತೊಡಗಿದವು. ಇದರಿಂದ ಅಂತಃಸ್ವರೂಪದಲ್ಲಿ ಒಂದೇ ಆಗಿದ್ದ ಸಾಹಿತ್ಯವು, ನಾನಾ ಪ್ರಕಾರದಲ್ಲಿ ಹೊರರೂಪು ಗಳನ್ನು ಪಡೆಯಿತು. ಭಾಷೆಯೆಂಬುದೂ ಸಾಹಿತ್ಯದ ಒಂದು ಹೊರರೂಪ"

(ಸಾಹಿತ್ಯವು ಸಾಗಿರುವ ದಾರಿ)

× × × × × ×

"ವ್ಯಕ್ತಿನಿಷ್ಠನಾದ ಮಾನವನನ್ನು ನಾಗರಿಕತೆ ಸಮಾಜನಿಷ್ಠನನ್ನಾಗಿ ಮಾಡಿತು. ಆಗ ವ್ಯಕ್ತಿಯು ತನ್ನ ಸ್ವೈರವೃತ್ತಿಯನ್ನು ಬಿಟ್ಟುಕೊಟ್ಟು ಅನಿವಾರ್ಯವಾಗಿ ಕೆಲವೊಂದು ನಿಯಮಗಳನ್ನು ಕಲ್ಪಿಸಿಕೊಂಡು ಅವುಗಳಿಗೆ ಆಧೀನನಾಗಿ ನಡೆಯಬೇಕಾಯಿತು. ಇದರಿಂದ ಮಾನವ ವ್ಯಕ್ತಿ ತನ್ನ ಸಂವೇದನೆಗಳ ಉತ್ಕಟತೆಗೆ ಒಂದು ಬಗೆಯ ಸಂಯಮದ ತಡೆಯನ್ನು ಕಟ್ಟಿಕೊಳ್ಳಬೇಕಾಯಿತು. ಸಾಮಾಜಿಕ ಸುಖಜೀವನಕ್ಕೆ ಇಂತಹ ನಿಯಮ-ಸಂಯಮ

ಗಳು ಅಗತ್ಯವೆಂಬುದರ ಮನವರಿಕೆಯಾದಾಗ, ವ್ಯಕ್ತಿ ಅವುಗಳನ್ನು ತನ್ನ ಬೇಕುಬೇಡಗಳ ಮಾಲಿಕೆಯಲ್ಲಿ ಸೇರಿಸಿಕೊಂಡು ಹೇಳತೊಡಗಿದನು."

(ಸಾಹಿತ್ಯವು ಸಾಗಿರುವ ದಾರಿ)

× × × × × × ×

"ವ್ಯಕ್ತಿಯು ಮತ್ತು ಸಮಾಜದ ಬಾಳು ಸಕಲ ವಿಧದಿಂದಲೂ ಸುಸೂತ್ರವಾಗಿ ಹೇಗೆ ಸಾಗಬಲ್ಲುದೆಂಬ ಬಗ್ಗೆ ಇರುವ ನಿತ್ಯ ಶಾಶ್ವತ ನಿಯಮಗಳ ತಿಳಿವಳಿಕೆ 'ಧರ್ಮ' ಎನಿಸುವುದು."

(ಸಾಹಿತ್ಯವು ಸಾಗಿರುವ ದಾರಿ)

× × × × × ×

"ನಮ್ಮ ಸಾವಿರಾರು ವರ್ಷಗಳ ಸಾಹಿತ್ಯಿಕ ವಿಚಾರ ಮಂಥನದಲ್ಲಿ ದೇವ—ದೇವತೆಗಳ ಸ್ಥಾನಮಾನಗಳಲ್ಲಿ ಪಲ್ಲಟವಾಗಿರಬಹುದು. ಮೋಕ್ಷ ಪುರುಷಾರ್ಥದ ಸಾಧನಾಕ್ರಮದಲ್ಲಿಯೂ ಸ್ವರೂಪದಲ್ಲಿಯೂ ಮಾರ್ಪಾಡುದುದು ಕಂಡುಬರಬಹುದು. ಆದರೆ ಐಹಿಕ ಜೀವನ ಸೌಂದರ್ಯಸಾಧಕಗಳಾದ ಧರ್ಮ-ಅರ್ಥ-ಕಾಮಗಳ ಸಾಧನೆಯ ಕ್ರಮದಲ್ಲಿಯೂ ನೀತಿ ನಿಯಮಗಳ ವಿಚಾರಗಳಲ್ಲಿಯೂ ಯಾವ ಬಗೆಯ ವ್ಯತ್ಯಾಸಗಳೂ ಕಂಡುಬರುವುದಿಲ್ಲ. ವೈದಿಕರು ಹೇಳುವುದು ಅದನ್ನೇ, ಜೈನರು ಹೇಳುವುದು ಅದನ್ನೇ, ವೀರಶೈವರು ಹೇಳುವುದು ಅದನ್ನೇ !"

(ಸಾಹಿತ್ಯವು ಸಾಗಿರುವ ದಾರಿ)

× × × × × ×

ನೆನಪಿನ ಘನತೆಯನ್ನು ಎನಿತೆನಿತು ಕೊಂಡಾಡಿದರೂ ತೀರದು. ನೆನಪಿನಿಂದಲೇ ಧರ್ಮ, ನೆನಪಿನಿಂದಲೇ ಕರ್ಮ; ನೆನಪು ಇರುವುದೆಂದೇ ಜಪ; ನೆನಪು ಇರುವುದೆಂದೇ ತಪ; ನೆನಪೊಂದು ಇರದಿದ್ದರೆ, ಶ್ರುತಿ ಸ್ಮೃತಿಗಳೂ ಇತಿಹಾಸ ಪುರಾಣಗಳೂ ಇದುವರೆಗೆ ಉಳಿಯುತ್ತಿರಲಿಲ್ಲ; ಹಿಂದುಸ್ಥಾನಕ್ಕೆ ಹಿಂದೆ ಎಷ್ಟೋ ಸಲ ಬಂದ ವಿಪ್ಲವಗಳಲ್ಲಿ ಸಿಕ್ಕು ನುಗ್ಗು ನುಗ್ಗಾಗಿ ಹೋಗುತ್ತಿದ್ದರು, ನೆನಪೊಂದು ಇರದಿದ್ದರೆ ಸ್ವದೇಶ ಪ್ರೀತಿಯಲ್ಲಿಯದು ? ಸ್ವಭಾಷೆಯ ಅಭಿಮಾನವೆಲ್ಲಿಯದು ? ನಾವು ಈಗ ಸ್ವಾತಂತ್ರ್ಯಕ್ಕಾಗಿ ಬಾಯಿ ಬಿಡುತ್ತಿರುವುದು ನಮ್ಮ ಹಿಂದಣ ಪ್ರತಾಪ ವೈಭವಗಳ ನೆನಪಿನಿಂದಲೇ ಇದು ಇರದೆ ಇದ್ದಲ್ಲಿ. ಮನುಷ್ಯನು ಕಣ್ಣಿದ್ದು ಕುರುಡನು. ಕಿವಿಯಿದ್ದು ಕಿವುಡನು, ಮಾತುಗಳಿದ್ದು ಮೂಕನು. ಬಗೆಯಿದ್ದು ಬದುಕಿನ ಹೆಣನು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಈ ನೆನಪು ಎಂಬುದೊಂದು ಇರುವುದರಿಂದಲೇ ಜಗತ್ತು ಸುಯಂತ್ರಿತವಾಗಿ ಸಾಗಿದೆ ಎನ್ನಲು ಆತಂಕವಾವುದೂ ಇರದು.

(ಸಂಸಾರ ಚಿತ್ರ)

× × × × × × ×

ಸಾಹಿತ್ಯವೆಂಬುದು ಯಾವಾಗಲೂ ಒಂದಿಲ್ಲೊಂದು ಬಗೆಯ ಆದರ್ಶಸಿದ್ಧಿಯನ್ನು ಬೋಧಿಸುವದೆಂದ ಮೇಲೆ, ಅದು ವ್ಯಕ್ತಿಯನ್ನಾಗಲೀ ಸಮಾಜವನ್ನಾಗಲೀ, ಆದರ್ಶದತ್ತ ಕ್ರಮಿಸಲು ಹಚ್ಚುವದು ಸತ್ಯವಾದ ಸಿದ್ಧಾಂತವಷ್ಟೆ ?

(ಜನಪದ ಜೀವನ)

× × × × × ×

ಹಿಂದಿನವರ ಆದರ್ಶಸಾಧನೆಯ ಮಾರ್ಗಕ್ರಮಗಳ ರೀತಿ ನೀತಿಗಳನ್ನು ಇಂದಿನವರಾದ ನಾವು ಸಂಪ್ರದಾಯವೆಂದು ಬೀಳುಗಳೆಯುವದು ಸರಿಯೆನಿಸದು. ಒಂದು ತಲೆಮಾರಿನವರ ಆದರ್ಶ ಸಾಧನೆ ಮುಂದಿನವರಿಗೆ ಸಂಪ್ರದಾಯವೆನಿಸಬಹುದೇನೋ ನಿಜ; ಈ ಸಂಪ್ರದಾಯದ ತಳಹದಿಯ ಮೇಲಿಂದಲೇ ಮುಂದಿನ ಆದರ್ಶದ ಕಡೆಗೆ ಅಡಿಯಿಟ್ಟು ನಡೆಯಬೇಕಾಗುವದೆಂಬುದು ಅಷ್ಟೇ ನಿಜ. ಬೇರೆ ಬೇರೆ ಕಾಲದ ಸಾಹಿತ್ಯಕೃತಿಗಳು ಬೇರೆ ಬೇರೆ ಕಾಲದ ಆದರ್ಶಗಳತ್ತ ಸಾಗಲು ಪ್ರಚೋದಿಸುತ್ತಿರುವವು. ಎಂದ ಮೇಲೆ ಸಾಹಿತ್ಯವು ಯಾವಾಗಲೂ ಎಲ್ಲಿಯೂ ಪ್ರಗತಿಶೀಲವಾಗಿರುವುದೆಂಬುದನ್ನು ನಾವೆಲ್ಲ ಅರಿತುಕೊಂಡು ನಡೆಯಬೇಕಾಗಿಲ್ಲವೆ ?

(ಜನಪದ ಜೀವನ)

× × × × × ×

ಸಾಹಿತ್ಯಕನಿಗೆ ವಿಚಾರ ಸ್ವಾತಂತ್ರ್ಯ ಬೇಕೆಂಬುದನ್ನು ಯಾರೂ ಅಲ್ಲಗಳೆಯಲಾರರು. ಆದರೆ ಅಂತಹ ಸ್ವಾತಂತ್ರ್ಯವನ್ನು ಒಂದು ಸೀಮೆಯವರೆಗೆ ಮಾತ್ರ ಒಪ್ಪಿಕೊಳ್ಳಬೇಕಾಗುವದು. ಸಾಹಿತ್ಯಕನ ವಿಚಾರ ಸ್ವಾತಂತ್ರ್ಯ ಕೇವಲ

ವೈಯಕ್ತಿಕ ದೃಷ್ಟಿಯುದೇ. ಆದರೆ, ಅದು ಸಮಾಜ ಜೀವನದಲ್ಲಿ ಅನವಸ್ಥೆಯನ್ನು ಉಂಟುಮಾಡುವದಿಷ್ಟೇ ಅಲ್ಲ; ವ್ಯಕ್ತಿ ವ್ಯಕ್ತಿಗಳ ಜೀವನದ ಅಶಾಂತಿಗೂ ಕಾರಣವಾಗುವದು.

(ಜನಪದ ಜೀವನ)

⁘ ⁘ ⁘ ⁘ ⁘ ⁘

ಕನ್ನಡ ಜನಜೀವನವನ್ನು ವಾಸ್ತವವಾಗಿ ಚಿತ್ರಿಸಬೇಕೆನ್ನುವವರು ಕನ್ನಡ ಸಮಾಜವನ್ನು ಸೂಕ್ಷ್ಮದೃಷ್ಟಿಯಿಂದ ಅಭ್ಯಸಿಸಬೇಕು. ಕನ್ನಡಿಗರ ಮತ, ಧರ್ಮ, ಕುಲಾಚಾರ, ಸಂಪ್ರದಾಯ ಉದ್ಯಮ-ವ್ಯವಸಾಯುಗಳ ಕೂಲಂಕಷ ಪರಿಚಯಮಾಡಿಕೊಳ್ಳಬೇಕು. ಅವರ ಆದರ್ಶ ಆಶೆ-ಆಕಾಂಕ್ಷೆಗಳೇನೆಂಬುದನ್ನು ಅರಿತುಕೊಳ್ಳಬೇಕು. ರಶಿಯದ ಜನಜೀವನ. ಕನ್ನಡಿಗರ ಜನಜೀವನವಾಗಲಾರದು. ಅಮೇರಿಕೆಯರ ಬೇಕು-ಬೇಡಗಳು ಕನ್ನಡಿಗರ ಬೇಕು-ಬೇಡಗಳಲ್ಲ. ಫ್ರಾನ್ಸಿನವರ ಸೌಂದರ್ಯ ಕಲ್ಪನೆಗಳು ಕನ್ನಡಿಗರ ಸೌಂದರ್ಯದ ಕಲ್ಪನೆಗಳಾಗಲಾರವು.

(ಜನಪದ ಜೀವನ )

⁘ ⁘ ⁘ ⁘ ⁘ ⁘ ⁘

ಐತಿಹಾಸಿಕ ವಸ್ತುಗಳನ್ನವಲಂಬಿಸಿ ಹೊರಟ ಸಾಹಿತ್ಯವು, ನಮ್ಮಲ್ಲಿ ವಿವಿಧ ಮುಖಗಳಿಂದ ನಿರ್ಮಿತವಾಗಬೇಕಾಗಿದೆ. ಅಂತಹ ಸಾಹಿತ್ಯ ನಿರ್ಮಿತಿಗೆ ಬೇರೆ ಬೇರೆ ಐತಿಹಾಸಿಕ ಕಾಲದ ಎಲ್ಲ ಬಗೆಯ ಸಂಸ್ಕೃತಿ ಪರಂಪರೆ ಚೆನ್ನಾಗಿ ಗೊತ್ತಿರಬೇಕಾಗುವುದು,

(ಕರ್ನಾಟಕ ಜನಜೀವನ)

ತಾಯ್ತನವನ್ನು ಬಯಸುವ ಗರತಿಗೆ ಹೆಣ್ಣು ಮಗುವಾದರೇನು, ಗಂಡು ಮಗುವಾದರೇನು ?

(ಮಾತನಾಡುವ ಕಲ್ಲು)

⁘ ⁘ ⁘ ⁘ ⁘ ⁘ ⁘

ಸಂಶೋಧನ ಮಾಡಬೇಕೆನ್ನುವವರಿಗ ಈ ನಾಡಿನಲ್ಲಿ ರೂಢವಾಗಿರುವ ಎಲ್ಲ ಲಿಪಿಗಳ ಪರಿಚಯವೂ ಬೇಕೇ ಬೇಕು. ಲಿಪಿಗಳ ಜ್ಞಾನವಿಲ್ಲದೆ ಯಾವ ಸಂಶೋಧಕನೂ ಪೂರ್ಣಫಲವನ್ನು ಪಡೆಯಲಾರ !

⁘ ⁘ ⁘ ⁘ ⁘ ⁘ ⁘

(ಕಳ್ಳರಗುರು)

'ಇತಿಹಾಸವೆಂದರೆ ಮಾನವಕುಲದ ಸರ್ವತೋಮುಖವಾದ ಜೀವನ ಚಿತ್ರ !'

ಕಳ್ಳರ ಗುರು)

⁘ ⁘ ⁘ ⁘ ⁘ ⁘ ⁘ ⁘

ಮನುಷ್ಯನ ಹೃದಯ ಕನ್ನಡಿಯಂತಿರುವುದು. ಕಲಿತವರಾದ ನಾವು ಬುದ್ಧಿಭಾಸ್ಕರನ ಪ್ರತಾಪದಿಂದ ಆ ಕನ್ನಡಿಯ ಪಾರಜನಕವನ್ನೆಲ್ಲ ಹಾರಿಸಿ ಬಿಡುವೆವು. ಆದರೆ ಕಲಿಯದವರದು ದಿನದಿನಕ್ಕೂ ರಾವುಗನ್ನಡಿಯಂತಾಗುವದು. ಯಾವುದೇ ಒಂದು ಭಾವನೆಯ ಚಿತ್ರವು ಅದರೊಳಗೆ ಭವ್ಯವಾಗಿ ಸ್ಫುಟವಾಗಿ ಮೂಡುವುದು. ಒಮ್ಮೆ ಮೂಡಿದುದನ್ನು ಅಳಿಸುವುದೆಂದರೆ ಅದೆಷ್ಟೋ ಕಷ್ಟದ ಕೆಲಸ.

(ನಮ್ಮ ಬದುಕು)

● ●

# 'ಸಾಮಾಜಿಕನ ಸಂವಚನಗಳು' ಗ್ರಂಥದಿಂದ ಸಂಗ್ರಹಿಸಿದ್ದ
# ಡಾ. ಬೆಟಗೇರಿ ವಿಚಾರಧಾರೆ

ಸಂಗ್ರಹಕರು :
ಸೌ. ಪುಷ್ಪಾ ಹೊಸೂರ
ಬಿ. ಎ.

### ಸಾಹಿತ್ಯಿಕನಿಗೇನು ಬೇಕು ?

ಸಾಹಿತ್ಯಿಕಂಗೆ ಬೇಕು ಕರಗುವ ಹೃದಯ;
ಸಾಹಿತ್ಯಿಕಂಗೆ ಬೇಕು ಅರಿಯುವ ಒಳಗಣ್ಣು!
ಅಯ್ಯಾ, ಬೇಕಾ ವ್ಯವಹಾರವಿದನಿಗೆ ಪರಿತವಾದ ಬುದ್ಧಿ;
ಬೇಕಾ ನೆಲೆಗಾರನಿಗೆ ಹಿಂಜಿ ಹಿಳಿದು ನೋಡುವ ಮನಸಿನ ಸಿದ್ಧಿ !
ಆದರ್ಶಗಳನೆ ಕಾಣುವ ಕನಸುಗಳು ಬೇಕಾ ದೃಷ್ಟಾರಂಗೆ;
ಚೆಲುವನ್ನು ಕಂಡು ಹಿಡಿವ ಚಾತುರಿ ಬೇಕಾ ಜೀವನ ರಚನಾಶಿಲ್ಪಿಗೆ !
ಭಾವ-ರಸಗಳನು ಕನ್ನಡಿಸಬಲ್ಲ ಪದಗಳ ಭಂಡಾರ ಬೇಕಾ ನುಡಿಜಾಣಂಗೆ;
ರಸಿಕವೃಂದವನು ಸೆಳೆದುಕೊಳಬಲ್ಲ ಕಲೆಯ ವಿಲಾಸ ಬೇಕಾ ಕಲ್ಪನಾ ಚಿತ್ರಿಕಂಗೆ !
ಇಂತಿವುಗಳಲಿ ಒಂದರ ಕೊರತೆಯಾದಡೆಯೂ ಚೆಲ್ವ ಮಾತೆನಿಸುವ ಸಾಹಿತ್ಯ
ಹುಲ್ಲುಮಾತಾಗಿ ನಿಲ್ವುದು ಕಾಣಾ, ಕನ್ನಡ ಜಾಣಾ !

—x—x—x—x—x—x—x—x—

### ಯಾವುದು ಸಾಹಿತ್ಯ ?

ವಾಸ್ತವವನ್ನು ಆದರ್ಶದ ಕಡೆಗೆ ಒಲಿಸುವ
ಆದರ್ಶವನ್ನು ವಾಸ್ತವ ಪ್ರಪಂಚಕ್ಕೆ ಎಳೆಯುವ
ಎದೆಯ ಮಾತುಗಳ ಸ್ರೋತ್ರವೇ ನಿಜವಾದ ಸಾಹಿತ್ಯ
ವೆನ್ನುವಳಯ್ಯಾ ನಮ್ಮ ಭಾವರಾಜ್ಯದ ರಾಣಿ ವಾಗೀಶ್ವರಿ !

### ಸಾಹಿತ್ಯ ಎಂತಿರಬೇಕು ?

ಸತ್ಯದ ಜೀವಾಳವಾಗಿರಬೇಕು ಸಾಹಿತ್ಯವೆಂಬುದು;
ಮೈತ್ರಿ ಕರುಣೆಗಳನ್ನು ತುಂಬಿಕೊಂಡಿರಬೇಕು ಸಾಹಿತ್ಯವೆನಿಪುದದು !
ಅಯ್ಯಾ, ಸರ್ವರ ಶಾಂತಿ-ತುಷ್ಟಿ-ಪುಷ್ಟಿಗಳ ಇಷ್ಟವೇ ಪಲ್ಲವಿಯಾಗಿರಬೇಕಾ ಸಾಹಿತ್ಯಕ್ಕೆ !
ಇವಿಲ್ಲದ ಸಾಹಿತ್ಯದ ರಾಶಿಯನೊಯ್ದು ಹೊಳೆಯಲ್ಲಿಕ್ಕೊ
ಎಂದು ಹೇಳುವಳಯ್ಯಾ, ಕಲ್ಯಾಣವಾಣಿ ವಾಗೀಶ್ವರಿ !

x—x—x—x—x—x—x—x

### ಸಾಹಿತ್ಯಿಕನಾಗಲು ಕಾರಣಗಳು

ಎಲ್ಲ ದೇಶ, ಎಲ್ಲಕಾಲ, ಎಲ್ಲ ಕುಲಗಳಲ್ಲಿಯೂ ಸಾಹಿತ್ಯಿಕರು
ಉದಯಿಸಬಲ್ಲರು ಕೇಳಯ್ಯಾ!
ಆದರೆ, ಎಲ್ಲಿಯೂ ಎಲ್ಲರೂ ಸಾಹಿತ್ಯಿಕರಾಗುವುದಕೆ ಸಾಧ್ಯವಿಲ್ಲವಯ್ಯಾ !
ಸಾಹಿತ್ಯಿಕನಾಗಲಿಕ್ಕೆ ಕಾರಣವಲ್ಲ ಕೇಳಾ ದೇಶ-ಕಾಲ-ಕುಲಗಳು!
ವ್ಯಕ್ತಿಯ ಸಹೃದಯ, ಸೂಕ್ಷ್ಮಬುದ್ಧಿ, ಸತತಾಭ್ಯಾಸ, ಸ್ವಾನುಭವಗಳೇ
ಮುಖ್ಯ ಕಾರಣಗಳು ಕೇಳು ತಂದೆ!

x—x—x—x—x—x—x—x

### ನಿಜವಾದ ಸಾಹಿತ್ಯಿಕನಾರು ?

ದೇಶ-ಕಾಲ-ಜನ ಸ್ವಭಾವಗಳಂತೆ ಬೇರೆ ಬೇರೆಯವರ ಬೇಕು-ಬೇಡಗಳು
ಬೇರೆ ಬೇರೆಯಾಗಿಹವಯ್ಯಾ!
ಆದುದರಿಂದಲೆ ಭಿನ್ನ ಭಿನ್ನ ಸಾಮಾಜಿಕ, ರಾಜಕೀಯ, ಧಾರ್ಮಿಕ
ವಾದಗಳು ತಲೆಯೆತ್ತಿ ನಿಲುವುದು ಕೇಳಯ್ಯಾ!
ಈ ವಾದಗಳ ಪರಿಚಯವ ಮಾಡಿಕೊಳಬೇಕಲ್ಲದೆ,
ಸಾಹಿತ್ಯಿಕ ಇವುಗಳ ಪ್ರಚಾರಕನಾಗ ಸಲ್ಲದು ಕಾಣಾ !
ಪ್ರಕೃತಿಯ ನಿತ್ಯಸತ್ಯದ ದರ್ಶನಕಾರನೆ
ನಿಜವಾದ ಸಾಹಿತ್ಯಿಕನೆನಿಸುವ ಕೇಳಯ್ಯಾ!

### ಕಾಲರಾಯನ ಕೇಳಿಕೆ

ದುಡಿವ ಹುರಿಯಾಳಂಗಳ ದುಡಿತದ ಪಡಿ ಯಾರ ಬಾಯಿಗೊ ಬಿದ್ದು,
ಬಡತನದ ಬಾಳು ಹೆಚ್ಚುತಿದೆ ನೋಡಾ!
ಇಂತಿರುವಾಗ ಶಾಂತಿ, ಪುಷ್ಟಿ, ತುಷ್ಟಿಗಳಿಗೆತಾಣವೆಲ್ಲಿದೆ ಯೆಂದು
ತಿರುತಿರುಗಿ ಕೇಳಿುವ ನಮ್ಮ ಕಿರಳಿದೆ ಕಾಲರಾಯ!

×—×——×——×——×——×——×—×

### ಎಚ್ಚರಿಕೆ

ಹೊಸವರ್ಷ ಬಂದಿದೆಯೆಂದು ಹಿಗ್ಗಿ ಹಾರಾಡುವ ಹಸುಳೆಗಳೆ,
ಹಳೆಯವರ್ಷದ ಹೊಟ್ಟೆಯಿಂದ ಹುಟ್ಟಿದುದೇ
ಈ ಹೊಸವರ್ಷವೆಂಬುದನು ಮರೆಯದಿರಿ!
ಹಳೆಯ ತಾಯಿ–ತಂದೆಗಳ ಗುಣ–ವಿಗುಣಗಳು
ಮಗುವಿನಲ್ಲಿ ಮೊಳಕೆಗೊಂಡಿಪ್ಪುವೆಂಬುದನು ಮರೆಯ ಬೇಡಿರಣ್ಣಾ!

×—×——×—×——×——×——×——×

### ಭವಿಷ್ಯಕ್ಕೆ ವರ್ತಮಾನವೇ ಪ್ರಚೋದಕ !

ಹಾಲಕ್ಕಿಯಿರುವ ಮೂಲೆಗಳನ್ನು ಸುತ್ತಿ ಸುತ್ತಿ ಭವಿಷ್ಯ ವರಿಯಲು
ಬಾಯಿ ಬಿಡುತ್ತಿರುವ ಬುಡುಬುಡಿಕರಣ್ಣಾ,
ಬರಡುಗೆಲಸವಿದೇನ ನಡೆಯಿಸಿರುವೆ ? ಹಾಲಕ್ಕಿ ಉಲಿ ಯುವುದೇಕೆ ?
ಹೊಟ್ಟೆಗೆ ಸಿಕ್ಕದಿರುವಾಗ ಅಳಲಿ ಬಲಗುಂದಿ ಕಲಕಲಿಸು ತ್ತಿದ್ದೀತು;
ಹೊಟ್ಟೆ ತುಂಬಿರುವಾಗ ಒಡನಾಡಿಗಳೊಂದಿಗೆ ಒಲವಿ ನಿಂದ ಕಿಲಿಕಿಲಿಸುತ್ತಿದ್ದೀತು.
ತನ್ನ ಅಳಲನ್ನೋ ನಲವನ್ನೋ ಹೊರಹೊಮ್ಮಿಸುತ್ತಿ ರುವ ಹಕ್ಕಿಯ ಹಾಡಿನಲಿ
ಬರುವ ಕಾಲದ ಕತೆಯೇನಿದ್ದೀತು ಮರುಳ ?
ಇರುಳ ಕೊನೆಯ ಈ ತನಿವೇಳೆಯನ್ನು ನಿನ್ನ ಬರುದನಿಯ ಬುಡುಬುಡಿಕೆಯಿಂದಲೂ
ಬಿರುದನಿಯ ಬಡಬಡಿಕೆಯಿಂದಲೂ ಏತಕ್ಕೆ ಕಹಿಗೊಳಿಸು ತಿರುವೆ ?
ಭವಿಷ್ಯದ ಒಳಿತು ಕೆಡಕುಗಳು ಹಕ್ಕಿಯ ಚಿಲಿಪಿಲಿಯಲ್ಲಿಲ್ಲ;
ಹಲ್ಲಿಯ ಲೊಟಲೊಟದಲ್ಲಿಲ್ಲ; ನರಿ–ನಾಯಿಗಳ ಊಳಿ ಯೊಳಿಲ್ಲ.
ನಿನ್ನ ನುಡಿಯಲ್ಲಿದೆ, ನಡೆಯಲ್ಲಿದೆ; ನಿನ್ನ ಕಲ್ಪನೆಯಲ್ಲಿದೆ, ಕನಸಿನಲ್ಲಿದೆ;
ನಿನ್ನ ಗೆಯ್ಮೆಯಲ್ಲಿದೆ, ಕೆಯ್ಮೆಯಲ್ಲಿದೆ.
ಗುರಿಯೊಂದನು ಗೊತ್ತುಮಾಡಿ,
ತಾಗು ಬಾಗು ತೊಂದರೆಗಳಿಗೆ ತಡೆದು ನಿಲ್ಲದೆ,
ಮುಂದಡಿಯಿಡುತ್ತಿದ್ದರೆ, ಭವಿಷ್ಯ ಒಳಿತಿನದಾಗಬಲ್ಲುದು.
ನಿರಿ–ಗುರಿಗಳಿಲ್ಲದೆ, ಬಂದ ತೊಂದರೆಗಳಿಗೆ ಬಾಯ್ ಬಿಡುತ್ತ
ನಿಂದಲ್ಲಿ ನಿಂತುಬಿಟ್ಟರೆ ಭವಿಷ್ಯ ಖಂಡಿತ ಕೆಡುಕಿನದು!
ನಮ್ಮ ಭವಿಷ್ಯಕ್ಕೆ ನಮ್ಮ ವರ್ತಮಾನವೆ ಪ್ರಚೋದಕ !
ನಮ್ಮ ಕೈಕಾಲು, ಮೈ–ಮನಸುಗಳ ತಕ್ಕುಮೆಯರಿತ ಅಲುಗಾಟವು
ಒಳ್ಳೆಯ ಭವಿಷ್ಯವನ್ನು ಕೈಹಿಡಿದು ಕರೆದು ತರಬಲ್ಲುದು.
ಕೀಳುಗರಗಳನ್ನು ಊಳಿಗದಾಳುಗಳನಾಗಿಸಬಲ್ಲುದು.
ಇದಕ್ಕೆ ಬುಡುಬುಡಿಕನ ಭವಿಷ್ಯದ ಬರುವಾಸೆ ಬೇಕಿಲ್ಲ.
ಕಾಲಪುರುಷ ಕರ್ಮದ ಜೀತಗಾರನೆಂಬುದರ ಅರಿವಿರಲಿ ಬುಡುಬುಡಿಕ !
ಭವಿಷ್ಯದ ಬರಡುಮಾತುಗಳಿಂದ ಲೋಕವನ್ನು ಕುರುಡು ಗೊಳಿಸಬೇಡ !
ವರ್ತಮಾನದ ಕರ್ತವ್ಯವನ್ನೊರೆದೊರೆದು ಎಚ್ಚರಿಸು !
ಅದಕ್ಕಾಗಿ ಬಾರಿಸು ಬಾರಿಸು ನಿನ್ನ ಬುಡುಬುಡಿಕೆಯನ್ನು!

×—×——×——×——×——×——×—×

### ಪರಮಾರ್ಥದ ಪಿಡುಗು

ಪರಮಾರ್ಥವೇ ಪುರುಷಾರ್ಥದ ಚರಮಸೀಮೆಯೆಂ ದೊರೆದು,
ಲೌಕಿಕವನು ಹಳಿದು ಗಳಹುವ ಗಣಂಗಳೆ ನೀವು ಕೇಳಿ ರಯ್ಯಾ !
ಪರಮಾರ್ಥ ಸಾಧಿಸುವುದಕ್ಕೆ ಮೊದಲು ಬೇಕಲ್ಲವೆ ಮೈ?
ಮೈಯಿದ್ದಲ್ಲಿಯೆ ಮನವಿರುವುದಲ್ಲವೆ ? ಮನವಿದ್ದಲ್ಲಿಯೆ ಭಾವನೆಯಿರುವುದಲ್ಲವೆ ?

ಪರಮಾರ್ಥವೆಂಬ ವಿಷಯ ಭಾವನೆಯ ಬಳ್ಳಿಗೆ ಅರಳಿದ
ಮುಗಿಲಮಲ್ಲಿಗೆಯೆಂಬುದನು ಅದೆಂದೋ ಕಂಡಿರುವ
ನಮ್ಮ ಕಾಲರಾಯಂ !
ಮೈ ಹುಟ್ಟುವುದು ಪರಮಾರ್ಥದಿಂದಲ್ಲ, ಲೌಕಿಕ
ದಿಂದಣ್ಣಾ !
ಮೈ ಬೆಳೆಯುವುದು ಪರಮಾರ್ಥದಿಂದಲ್ಲ, ಲೌಕಿಕ
ದಿಂದಣ್ಣಾ !
ಹಡೆದ ತಂದೆ-ತಾಯಿಗಳು ಲೌಕಿಕರು ;
ಒಡಲ ಹೊರೆಯುವ ಅನ್ನೌಷಧಿಗಳು ಲೌಕಿಕಗಳಣ್ಣಾ !
ಒಡಲಲ್ಲಿ ಮಿಡಿವ ಮನಸ್ಸು ಲೌಕಿಕ ;
ಮನಸ್ಸು ಪಡೆವ ಪ್ರತ್ಯಕ್ಷಾನುಭವಗಳು ಲೌಕಿಕವಣ್ಣಾ !
ಇಂತಿರುವಾಗ, ಲೌಕಿಕವನೆಲ್ಲ ಕುರುಡುಗಣ್ಣಿಂದ ನೋಡಿ
ಕಳೆಯೆಂಬ
ಪರಮಾರ್ಥಿಗಳನು ಹುಟ್ಟುವುದಕ್ಕೆ ಮೊದಲೆ
ಹೆಣಗಳ ಲೋಕದಲ್ಲಿ ಇಕ್ಕೆಣ್ಣುವ ನಮ್ಮ ಕಡುಗಣ್ಣ
ಕಾಲರಾಯ !

x—x——x——x——x——x——x—x

## ದೇವರನು ಕಾಂಬುವುದು

ದೇವರನು ಕಾಂಬುದೇ ಮಾನವನ ಮುಂಬರಿತದ ಗುರಿ
ಯೇನಣ್ಣಾ ?
ದೇಶ-ದೇಶದಲಿ, ಕಾಲ-ಕಾಲದಲಿ, ಕುಲ-ಕುಲಗಳಲಿ,
ಮನೆ-ಮನೆಗಳಲಿ
ಬೇರೆ ಬೇರೆಯಾಗುತ್ತ ಬಂದಿರುವ ದೇವರೆಂಬ ಭಾವ
ನೆಯ ಚಿತ್ರವನು,
ಕಣ್ಣಿಂದ ಕಂಡಿವರು ಯಾರುಂಟು ತಂದೆ ?
ಇದು ದೇವರೆಂದು ತೋರಿಸಿ, ಅದನೆ ದೇವರಲ್ಲವೆಂದು
ಹೇಳುವ
ಹಿರಿನುಡಿಯ ಹುರುಳೇನೆಂಬುದನು ಅರಿತಿಹೆಯೋ
ನಯ್ಯಾ ?
ತಂದೆಯೆ ದೇವರು, ತಾಯಿ ದೇವರು, ಅತಿಥಿಯೆ
ದೇವರು, ಗುರುವೆ ದೇವರು
ಎಂದು ಹೇಳಿದ ತಿಳಿನುಡಿಯ ತಿಳಿದು ನಡೆದಿಹೆ
ಯೇನಯ್ಯಾ?

ಅನ್ನವೇ ದೇವರೊಂದೆರೆದ ಅನುಭವ ವಚನವೆ, ಪ್ರಾಣವೆ
ದೇವರೆಂದು ಉಗ್ಗಡಿಸಿದೆ !
ಅದೇ ನುಡಿ ಮನವೇ ದೇವರೆಂದಿದೆ, ವಿಜ್ಞಾನವೆ
ದೇವರೆಂದಿದೆ,
ಆನಂದವೆ ದೇವರೆಂದಿದೆ ಕಾಣಯ್ಯಾ?
ಈ ದೇವರುಗಳನು ಸಾಕ್ಷಾತ್ಕಾರ ಮಾಡಿಕೊಂಡಿಹೆ
ಯೇನು ತಂದೆ ?
ಇವೆಲ್ಲ ಇದ್ದ ದೇವರುಗಳ ಕೈಯನು ಬಿಟ್ಟು, ಕನಸಿನ
ಮಂಜನರಸುತ ನಡೆವ
ಮಾನವಕುಲವ ಕಂಡು ಕನಿಕರಪಡುವನಯ್ಯಾ ನಮ್ಮ
ಕಾಲರಾಯ !

x—卐—x—x——x—卐—x——x—x—x

## ಆಶಾ

ಆಶೆಯನಳಿ, ಆಶೆಯನಳಿ! ಎಂದು ಘೋಷಿಪ್ಪ
ದೇಶಿಕ ಶಿಖಾಮಣಿಗಳು ದೇಶದ ನಾಶಕ್ಕೆ ಕಾರಣರಪ್ಪರು
ಕಾಣೆ ಭೋ !
ಆಶೆಯೆ ಸಕಲ ಚೇತನದ ಮೂಲ ಸದ್ಧರ್ಮ ಕೇಳಿ ಭೋ!
ಜಗದ ಜೀವ ಜಂಗುಳಿಯ ಮುಂದುವರಿತಕ್ಕೆ ಆಶೆಯೇ
ಆಶುವೇಗದ ಕುದುರೆ ಕಾಣೆ ಭೋ !
ಆಶೆಯನೊಲ್ಲದವನಿಗೆ ಅರುಹಿನ ಬೆಳಕೇತಕ್ಕೆ ?
ಆಶೆಗೆ ಸಲ್ಲದವನಿಗೆ ಬಲುಹೀನ ಚಲವೇತಕ್ಕೆ ?
ಆಶೆ ಅಳಿದವನಿಗೆ ಹೊನ್ನು ಹಣಗಳೆಲ್ಲಿಯವು ?
ಆಶೆ ಅಳಿದವನಿಗೆ ಅನ್ನ-ಅರಿವೆಗಳೆಲ್ಲಿಯವು ?
ತಿಳಿವು-ಬಲುಹು; ಅನ್ನ-ಹೊನ್ನಗಳಿಂದ ಮಾನವ ಜೀವಿಗೆ
ಬದುಕಿನೊಳು ಹಂಬಲೇತಕರದು ?
ಅದರಿಂದಲೇ ಕಾಲರಾಯಂ ಕೆರಳಿ ಕೇಳುವ;
"ಆಶೆಯನಳಿಯೆನ್ನುವ ಹೇಸಿ ಉಪದೇಶಿ ! ನೀನೇತಕೆ
ಜನಿಸಿದೆ,
ಏತಕಾಗಿ ಜೀವಿಸುವೆ ಜಗದೊಳಗೆ ?" ಎಂದು
ಜೀವಕುಲದ ಜೀವ-ಜೀವಾಳವೇ ಆಶೆಯೆಂಬುದ
ನರಿಯಿರೊ!
ತಾಯ ಬಸಿರ ಬಯಕೆಯೊಳೆ ಜೀವದ ಸ್ವಭಾವ-
ಧರ್ಮಕಾಂಬುದನು ಕಾಣಿರೊ!

ತರುಣ್ಯಾ, ಬೀಜ-ಬೀಜದೊಳು ಹುದಗಿಹುದು ಮೊಳೆತು
ತಳಿರಂಪಾಶೆ,
ತಳಿರು ತಳಿರಲಿಯೂ ತುಂಬಿ ನಿಂದಿಹುದು ಮೊಗ್ಗೆಯ
ಪಡೆದಾಶೆ;
ಮೊಗ್ಗೆ ಮೊಗ್ಗೆಯನೂ ಹಿಗ್ಗಿಸುತಿಹುದು ಅರಳಾಗ
ಬೇಕೆಂಬಾಶೆ;
ಅರಳೆ ಅರಳನೂ ಬಾಯ್ದೆರೆಸಿ ಬಾಡಿಸುವುದು ಫಲವ
ಪಡೆವಾಶೆ:
ಫಲ ಫಲಗಳನೂ ಪರಿಪಕ್ವಗೊಳಿಸುತ್ತಿಹುದು ಕುಲವ
ನನವರತವ್ಪೂ
ಕಾಯಬೇಕೆಂಬಾಶೆ!
ಇಂತೀ ಆಶೆಯು ಚಕ್ರದ ಮೇಲೆಯೇ ತಿರುಗುತಿದೆ
ವಿಶ್ವದ ಚೈತನ್ಯ ಚಕ್ರ !
ಇದನು ಮರೆತು ನಡೆವವನೆ ಲೋಕಕಂಟಕನಾದ ನಕ್ರ!
ಕಾಲರಾಯನೇಗಲೂ ಕೂಗಿ ಹೇಳುವ ನೀತಿಯೊಂದು:
"ಆಶೆಯ ಒಳ್ನೆರಿವಿನಿಂದ ನಡೆವವನೆ ಆಗುವನು ಶಕ್ರ-
ಆಗುವವನು ಶಕ್ರ!" ಎಂದು.

ನಿನ್ನ ಹಸಿವಿಂಗೆಂದಿರುವ ಅನ್ನವನು ಅನ್ನಿಗರು ಬಂದು
ಸೆಳೆದೊಯ್ಯುವಾಗ,
ಕುನ್ನಿಯಂತೆ ಕುಂಯ್ಗುಡುತ್ತ ಕುಳಿತರೆ ಆಗುವು
ದೇನಯ್ಯಾ !
ಅಯ್ಯಾ, ಅತ್ತರೆ ಆರುವುದೆ ಹಸಿವಿನುರಿಯ ತಳಮಳ ?
ಹಣೆಯ ಹೊಡೆದುಕೊಂಡರೆ ಹಾರುವುದೆ-ಹಸಿವು ಕುತ್ತದ
ಕಳವಳ ?
ಕಣ್ದೆರೆದು ನೋಡು-ಅನ್ನವನೊಯ್ವ ಅನ್ನಿಗರನು!
ಕಿವಿದೆರೆದು ಕೇಳಾ ಕಳ್ಳರ ಕಲಕಲಾಟವನು !
ಅಯ್ಯಾ, ಅಡಿಯ ಮುಂದಿಟ್ಟು ಓಡುವರನು ಬೆಂಬತ್ತಿ,
[illegible]

ಹಿಡಿ ಕೈಯಿಂದಾ ಕಳ್ಳರನು ಒತ್ತಿ:
ಬಿಡು ಮುಂದಬಂದು ತೋರು ಒಳ್ಳೆದೆಯ ಬಲುಹನೆತ್ತಿ!
ಕಿತ್ತುಕೊಳು ತಂದೆ, ಮರಳಿ ನಿನ್ನ ಅನ್ನವನು;
ಇದನೊಲ್ಲದಿರೆ ಸತ್ತು ಹೋಹುದೇ ಲೇಸು ಕಣಾ ನೀನು!
ಅಯ್ಯಾ, ಮರೆಯದಿರು ನಮ್ಮ ಕಾಲರಾಯನ ಈ
ಅಮೃತವಾಣಿಯನ್ನು!

xxxx

ಡಾ॥ ಎಸ್. ಆರ್. ಗುಂಜಾಳ.
ಎಲ್ ಎಸ್. ಸಂಗಮ

# 'ಆನಂದಕಂದರ ಕೃತಿ ಸೂಚಿ'

### (ಅ) ಕವಿತೆ

೧) ಅರುಣೋದಯ
ಜಿ. ಎನ್. ಜೋಶಿ ಎಂಡ್ ಬ್ರದರ್ಸ್
ಬೆಂಗಳೂರು, ೧೯೨೬

೨) ಉತ್ಸಾಹಗಾಥಾ
ಪುರಂದರ ಪ್ರಕಟನಾಲಯ ಧಾರವಾಡ, ೧೯೭೨

೩) ಒಡನಾಡಿ
ಸಮಾಜ ಪುಸ್ತಕಾಲಯ ಧಾರವಾಡ, ೧೯೫೬

೪) ಕಾರಹುಣ್ಣಿವೆ.
ಶರತ್ ಪ್ರಕಾಶನ ಮಂದಿರ ಧಾರವಾಡ, ೧೯೫೩

೫) ಗಾಂಧೀ ಗೀತ ಸಪ್ತಕ
ಬೆಳಗಾಂವಿ, ೧೯೨೧

೬) ನಲ್ವಾಡುಗಳು
ಶರತ್ ಪ್ರಕಾಶನ ಮಂದಿರ ಬೆಳಗಾಂವಿ, ೧೯೫೮

೭) ಭಾವಗೀತ
ಕರ್ನಾಟಕ ರಾಷ್ಟ್ರೀಯ ಶಿಕ್ಷಣಸಮಿತಿ
ಗ್ರಂಥಮಾಲೆ-೪, ಧಾರವಾಡ, ೧೯೨೬

೮) ಮುದ್ದನ ಮಾತು
ಪ್ರತಿಭಾ ಮುದ್ರಣ, ಧಾರವಾಡ, ೧೯೨೬

೯) ರಮೆ ಉಮೆಯರ ಸಂವಾದ
ಬೆಳಗಾಂವಿ, ೧೯೨೪

೧೧) ರಾಷ್ಟ್ರೀಯ ಪದ್ಯಮಾಲೆ
ಬೆಳಗಾಂವಿ, ೧೯೨೧

೧೧) ರಾಷ್ಟ್ರೀಯ ಪದ್ಯಾವಲಿ
ಬೆಳಗಾಂವಿ, ೧೯೨೧

೧೨) ವಿರಹಿಣಿ
ಸಮಾಜ ಪುಸ್ತಕಾಲಯ
ಧಾರವಾಡ, ೧೯೫೬

೧೩) ಸಾಮಾಜಿಕನ ಸಂವಚನಗಳು
ಜನತಾ ಶಿಕ್ಷಣ ಸಮಿತಿ ಪ್ರಕಟನೆ (೧೯೮೧)

### (ಆ) ಕಥಾಸಂಕಲನ

೧೪) ಕಳ್ಳರ ಗುರು ಮತ್ತು ಇತರ ಕಥೆಗಳು
ಉಷಾ ಪ್ರೆಸ್, ಮೈಸೂರು. ೧೯೬೯

೧೫) ಜನಪದ ಜೀವನ

೧೬) ದಶಮಂಜರಿ (ಆಯ್ದ ಕಥೆಗಳ ಸಂಗ್ರಹ)
ಸುರುಚಿ, ಮೈಸೂರು, ೧೯೬೮

೧೭) ನಮ್ಮ ಬದುಕು
(ಸ್ವಂತ ಪ್ರಕಟಣೆ) ಧಾರವಾಡ, ೧೯೩೯

೧೮) ಬಡತನದ ಬಾಳು
ಜಯಕರ್ನಾಟಕ ಗ್ರಂಥಮಾಲೆ, ಧಾರವಾಡ ೧೯೩೨

೧೯) ಮಾತನಾಡುದ ಕಲ್ಲು
ಸಮಾಜ ಪುಸ್ತಕಾಲಯ, ಧಾರವಾಡ, ೧೯೬೩

೨೦) ಸಂಸಾರಚಿತ್ರ
ರಾಷ್ಟ್ರೀಯ ಶಿಕ್ಷಣ ಸಮಿತಿ ಧಾರವಾಡ, ೧೯೩೨

### (ಇ) ಕಾದಂಬರಿ

೨೧) ಅಶಾಂತಿ ಪರ್ವ
ಶರತ್ ಪ್ರಕಾಶನ ಮಂದಿರ, ಧಾರವಾಡ, ೧೯೩೫

೨೨) ಮಗಳ ಮದುವೆ
ಶರತ್ ಪ್ರಕಾಶನ ಮಂದಿರ, ಬೆಳಗಾಂವಿ, ೧೯೬೭

೨೩) ಮಲ್ಲಿಕಾರ್ಜುನ
ಶರತ್ ಪ್ರಕಾಶನ ಮಂದಿರ, ಬೆಳಗಾಂವಿ, ೧೯೬೧

೨೪) ರಾಜಯೋಗಿ
ಮನೋಹರ ಗ್ರಂಥಮಾಲಾ, ಧಾರವಾಡ, ೧೯೩೪

೨೫) ರಾಜಶೇಖರ('ರಾಜಯೋಗಿ'ಯ ಸಂಕ್ಷಿಪ್ತ ಆವೃತ್ತಿ)
ಶಂಭುಲಿಂಗ. ಶಿ. ಕುಲಕರ್ಣಿ, ಧಾರವಾಡ, ೧೯೬೪

೨೬) ಸುದರ್ಶನ

ಕನ್ನಡ ಸಾಹಿತ್ಯ ಪ್ರಕಾಶನ, ಧಾರವಾಡ, ೧೯೬೩

### (ಈ) ನಾಟಕಗಳು

೨೭) ಪಂಚಗಂಗಾ

ಮಿಂಚಿನಬಳ್ಳಿಕಾರ್ಯಾಲಯ, ಧಾರವಾಡ,೧೯೬೩

೨೮) ಬೆಂದ ಹೃದಯ

ಶರತ್ ಪ್ರಕಾಶನ ಮಂದಿರ, ಧಾರವಾಡ, ೧೯೫೪

೨೯) ಬೆಳವಡಿ ಮಲ್ಲಮ್ಮ

ಶರತ್ ಪ್ರಕಾಶನ ಮಂದಿರ, ಬೆಳಗಾಂವಿ, ೧೯೫೧

೩೦) ಮುಂಡರಗಿ ಗಂಡುಗಲಿ

ಪುರಂದರ ಪ್ರಕಟಣಾಲಯ, ಧಾರವಾಡ, ೧೯೬೨

### (ಉ) ಚರಿತ್ರ

೩೧) ಕನ್ನಡ ರಾಜ್ಯ ರಮಾರಮಣ

ಗೌರೀಶ ಪುಸ್ತಕಾಲಯ, ಧಾರವಾಡ, ೧೯೬೨

### (ಊ) ವಿಮರ್ಶೆ-ಸಂಶೋಧನೆ-ಸಂಸ್ಕೃತಿ

೩೨) ಕರ್ನಾಟಕ ಜನಜೀವನ

ಸಮಾಜ ಪುಸ್ತಕಾಲಯ, ಧಾರವಾಡ, ೧೯೩೯

೩೩) ನಮ್ಮ ಸಂಸ್ಕೃತಿ ಪರಂಪರೆ

ಸಮಾಜ ಪುಸ್ತಕಾಲಯ, ಧಾರವಾಡ, ೧೯೬೯

೩೪) ಸಾಹಿತ್ಯವು ಸಾಗಿರುವ ದಾರಿ

ಮಿಂಚಿನಬಳ್ಳಿ ಪ್ರಕಾಶನ, ಧಾರವಾಡ, ೧೯೬೧

೩೫) ಸಾಹಿತ್ಯ ವಿಹಾರ

ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೮೧

### (ಎ) ಜನಪದ ಸಾಹಿತ್ಯ

೩೬) ಕನ್ನಡ ಜಾನಪದ ಸಾಹಿತ್ಯ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

೩೭) ಬೀಸುಕಲ್ಲಿನ ಹಾಡುಗಳು

ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೨೮

೩೮) ಅಧ್ಯಕ್ಷೀಯ ಭಾಷಣ. (ನಾಗಮಂಗಲದ ಜನಪದ ಸಾಹಿತ್ಯ ಸಮ್ಮೇಳನ)

ಜಾನಪದ ಪರಿಷತ್ತು, ಮೈಸೂರು, ೧೯೭೧

### (ಏ) ಅನುವಾದ

೩೯) ಮಧ್ಯಮ ವ್ಯಾಯೋಗ

ಬೆಳಗಾಂವಿ, ೧೯೨೪

### (ಐ) ಸಂಪಾದಿತ ಕೃತಿಗಳು

೪೦) ಅಕ್ರೂರ ಚರಿತ್ರ.

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೯

೪೧) ಕನಕದಾಸರ ಭಕ್ತಿಗೀತೆಗಳು

ಸಮಾಜ ಪುಸ್ತಕಾಲಯ, ಧಾರವಾಡ, ೧೯೬೫

೪೨) ಪ್ರಸನ್ನ ವೆಂಕಟದಾಸರ ಭಾಗವತ

ಕೌಜಲಗಿ ಬಂಡೆಪ್ಪ, ಧಾರವಾಡ, ೧೯೬೯.

೪೩) ಹರಿದಾಸ ಭಕ್ತಿಸಾಧನೆ

ಮಿಂಚಿನಬಳ್ಳಿ ಧಾರವಾಡ, ೧೯೬೯

೪೪) ಮೃಚ್ಛಕಟಿಕ

ಗೌರೀಶ ಗ್ರಂಥ ಪ್ರಕಟನಾಲಯ ಧಾರವಾಡ ೧೯೬೧

೪೫) ಪೂಜಾತತ್ವ—೧೯೬೩

೪೬) ಆರ್ತಭಾವ—೧೯೬೪

೪೭) ಮಹಾತ್ಮ್ಯಜ್ಞಾನ—೧೯೬೪

೪೮) ಕೃಷ್ಣಲೀಲಾ – ೧೯೬೫

೪೯) ಲೋಕನೀತಿ – ೧೯೬೬

೫೦) ಸಂಕೀರ್ಣ-ಸಂಗ್ರಹ—೧೯೬೫

(ಮೇಲಿನ ಆರು ಪುಸ್ತಕಗಳ ಪ್ರಕಾಶಕರು-ಶ್ರೀ ಪುರಂದರ ದಾಸರ ೪೦೦ ನೆಯ ವರ್ಷದ ಉತ್ಸವ ಮಂಡಳಿ ಧಾರವಾಡ)

### (ಒ) ಮಕ್ಕಳ ಸಾಹಿತ್ಯ

೫೧) ಚಂದ್ರಹಾಸ

ಗೌರೀಶ ಪ್ರಕಟನಾಲಯ, ಧಾರವಾಡ, ೧೯೬೭

೫೨) ಬಸವಣ್ಣನವರು

ಸಾಹಿತ್ಯ ಭಂಡಾರ, ಹುಬ್ಬಳ್ಳಿ ೧೯೨೭

೫೩) ಭೀಷ್ಮ

ಗೌರೀಶ ಪ್ರಕಟನಾಲಯ, ಧಾರವಾಡ ೧೯೬೨

೫೪) ಲವಕುಶ

ಗೌರೀಶ ಪ್ರಕಟನಾಲಯ, ಧಾರವಾಡ, ೧೯೬೨

### (ಓ) ಪತ್ರಿಕಾ ಸಂಪಾದನೆ

೧) ಮಾತೃಭೂಮಿ

(ಮಾಸಿಕ) ಬೆಳಗಾಂವಿ. ಜನೇವರಿಯಿಂದ ಡಿಸೆಂಬರ್ ೧೯೨೨

೨) ಸ್ವಧರ್ಮ
(ಮಾಸಿಕ, ಧಾರವಾಡ, ೧೯೨೬
೩) ಜಯಕರ್ನಾಟಕ
(ಮಾಸಿಕ) ಧಾರವಾಡ, ೧೯೩೧ ರಿಂದ ೧೯೩೩
ಮತ್ತು ೧೯೫೫ ರಿಂದ ೧೯೩೬.
೪) ಜಯಂತಿ
(ಮಾಸಿಕ) ಧಾರವಾಡ. ೧೯೩೮ ರಿಂದ ೧೯೬೧.

ಆನಂದಕಂದರನ್ನು ಕುರಿತು (ವ್ಯಕ್ತಿ ಮತ್ತು ಸಾಹಿತ್ಯ) ಗ್ರಂಥಗಳು

೧) 'ಆನಂದ ಕಂದ'
ಸಂ : ಬಿಂದುಮಾಧವ ಬುರ್ಲಿ, ಮತ್ತು ಅನಂತ ತಡಸ ಮುಂಚಿನಬಳ್ಳಿ ಧಾರವಾಡ -೧೯೬೦
೨) 'ಆನಂದಕಂದ : ಕವಿ ಕಾವ್ಯವಿಮರ್ಶೆ'
ಡಾ। ಎ. ಕೆ. ಕುಲಕರ್ಣಿ. ೧೯೭೫
(ಪಿ. ಎಚ್. ಡಿ. ಪ್ರಬಂಧ. ಅಪ್ರಕಟಿತ).

---



---

ಸುರೇಶ ಬೆಟಗೇರಿ

# ಆನಂದಕಂದರ ಜೀವನ ಘಟನಾವಳಿ



೧) ೧೯೦೦—ಗೋಕಾಕ ತಾಲೂಕಿನ ಬೆಟಗೇರಿಯಲ್ಲಿ ೧೬-೪—೧೯೦೦ ಮುಂಜಾನೆ ೭ ಗಂಟೆಗೆ ಜನನ.

೨) ೧೯೦೬—ಪ್ರಾಥಮಿಕ ಶಾಲೆಗೆ ಪ್ರವೇಶ,

೩) ೧೯೧೧—ಉಪನಯನ ಸಮಾರಂಭ.

೪) ೧೯೧೨—ಪಿತೃವಿಯೋಗ.

೫) ೧೯೧೩—ನಾಟಕದಲ್ಲಿ ಪಾತ್ರಾಭಿನಯ (ಚಿತ್ರಕೇತು (ನಾಟಕದಲ್ಲಿ)

೬) ೧೯೧೪—ಪ್ಲೇಗಿನಿಂದ ಬಳಲಿಕೆ.

೭) ೧೯೧೫—ಅಣ್ಣ ಹಣಮಂತರಾಯನ ವಿಯೋಗ.

೮) ೧೯೧೭—ಮುಲ್ಕಿ ಪರೀಕ್ಷೆಯಲ್ಲಿ ಉತ್ತೀರ್ಣ.

೯) ೧೯೧೮—'ಭಕ್ತಿಕುಸುಮಾವಳಿ' 'ಪ್ರಭಾತ' ಪ್ರಕಟಣೆ ಮತ್ತು ಮಾತೃ ವಿಯೋಗ

೧೦) ೧೯೧೯—ಕನ್ನಡ ದೀಕ್ಷೆ. ಕಿತ್ತೂರ ನರಸಿಂಹಾಚಾರ್ಯ ಪುಣೇಕರರ ಶಿಷ್ಯತ್ವ ಮತ್ತು ಕರ್ನಾಟ ಕಾಂಬೆ ನೀ ಧನ್ಯ ಧನ್ಯ ನಾಡಗೀತೆಯ ರಚನೆ.

೧೧) ೧೯೨೧—ಸ್ವರಾಜ್ಯ ಆಶ್ರಮದಲ್ಲಿ ವಾಸ; ಅಸಹಕಾರ ಚಳವಳಿಯಲ್ಲಿ ಭಾಗಿ ಮತ್ತು ರಾಷ್ಟ್ರೀಯ ಶಾಲೆಯ ಶಿಕ್ಷಕ-ಬೆಳಗಾಂವಿಯಲ್ಲಿ.

೧೨) ೧೯೨೨—ರಾಣೆಬೆನ್ನೂರ ಜಿಲ್ಲಾ ರಾಜಕೀಯ ಪರಿಷತ್ತಿನಲ್ಲಿ ಡಾ. ಶಂ. ಬಾ. ಜೋಶಿ ಅವರ ಮೊದಲ ಭೆಟ್ಟಿ. ಅವರೊಂದಿಗೆ ಧಾರವಾಡಕ್ಕೆ ಬಂದಾಗ ಡಾ. ದ. ರಾ. ಬೇಂದ್ರೆ ಅವರ ಮೊದಲ ಪರಿಚಯ.

೧೩) ೧೯೨೩—ರಂದು 'ಮಾತೃಭೂಮಿ' (ಬೆಳಗಾಂವಿಯಲ್ಲಿ) ಸಂಪಾದಕರಾಗಿ ಸೇವೆ, ಮತ್ತು ೧೯೨೪ ರ ತನಕ ಪ್ರಾಥಮಿಕ ಶಿಕ್ಷಕರಾಗಿ ಸೇವೆ; ಯಮಕನ ಮರಡಿ, ಬೆಳಗಾಂವಿ, ಮೂಡಲಗಿ, ಹುದಲಿಗಳಲ್ಲಿ, ಮತ್ತು ಬೆಳಗಾಂವಿ ಕಾಂಗ್ರೆಸ್ ಅಧಿವೇಶನದ ಸ್ವಾಗತಗೀತೆ ರಚನೆ.

೧೪) ೧೯೨೪—"ಸ್ವಧರ್ಮ" ಪತ್ರಿಕೆಯ ಸಂಪಾದಕರಾಗಿ ಸೇವೆ. ರಾಷ್ಟ್ರೀಯ ಶಾಲಾ ಶಿಕ್ಷಕರಾಗಿ ಧಾರವಾಡಕ್ಕೆ ಆಗಮನ, ಮತ್ತು ಬೆಳಗಾಂವಿಯ ಸಾಹಿತ್ಯ ಸಮ್ಮೇಲನದ ಮುಂದಾಳುತನ. ನಾಡ ಹಬ್ಬದ ಆಚರಣೆಯ ಪ್ರಾರಂಭ.

೧೫) ೧೯೨೬—ಬೆಂಗಳೂರಿಗೆ ಆರ್ಯವಿದ್ಯಾಶಾಲೆಯ ಶಿಕ್ಷಕರಾಗಿ ಕೆಲಸ

೧೬) ೧೯೨೭—ಡಾ. ಮಾಸ್ತಿಯವರ ಸ್ನೇಹ, ಮದ್ದಿನ ಮಾತು, ಅರೋಣದಯ ಪ್ರಕಟಣೆ.

೧೭) ೧೯೨೮—ಬೆಳಗಾಂವಿ ಜಿಲ್ಲೆಯ ಮಣಗುತ್ತಿ ಎಂಬ ಹಳ್ಳಿಯಲ್ಲಿ ತುಳಸಾಬಾಯಿ (ರುಕ್ಮಿಣಿಬಾಯಿ) ಯೊಂದಿಗೆ ವಿವಾಹ.

೧೮) ೧೯೨೯—ಬೆಂಗಳೂರಿನಲ್ಲಿ "ನವಜೀವನ" ದೈನಿಕದ ವಿಶೇಷ ಸಂಚಿಕೆಯ ಸಂಪಾದನೆ ಬೆಳಗಾಂವಿಯಲ್ಲಿ ಸೇರಿದ ಕವಿಸಮ್ಮೇಲನಕ್ಕೆ ಸ್ವಾಗತಾಧ್ಯಕ್ಷ.

೧೯) ೧೯೩೧—ಬಡತನದಬಾಳು ಪ್ರಥಮ ಪ್ರಕಟಣೆ.

೨೦) ೧೯೩೩—ಸುಂದರ್ಶನ ಪ್ರಥಮ ಕಾದಂಬರಿಯ ಪ್ರಕಟಣೆ.

೨೧) ೧೯೩೪—ಮಗಳು ವೈಜಯಂತಿ ಜನನ.

೨೨) ೧೯೩೫—ಮನೋಹರ ಗ್ರಂಥಮಾಲೆಯ ಪ್ರಾರಂಭ

೨೩) ೧೯೩೮—ಜಯಂತಿಯ ಸಂಪಾದನೆಯ ಪ್ರಾರಂಭ ತಮ್ಮ ವಿಜಯೇಂದ್ರನ ಮರಣ,ಮಗಳು

ಸಂಧ್ಯಾಳ ಜನ್ಮ; ಜಮಖಂಡಿಯಲ್ಲಿ ಕವಿ ಸಮ್ಮೇಲನದ ಅಧ್ಯಕ್ಷ

೨೪) ೧೯೩೯—ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯಕಾರಿ ಮಂಡಲದ ಸದಸ್ಯ.

೨೫) ೧೯೪೦—ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯದರ್ಶಿ, ಧಾರವಾಡದಲ್ಲಿಯ ಸಾಹಿತ್ಯ ಸಮ್ಮೇಳನದ ಕಾರ್ಯಕರ್ತ.

೨೬) ೧೯೪೧—ಹೈದರಾಬಾದ ಕರ್ನಾಟಕ ಸಾಹಿತ್ಯ ಸಮ್ಮೇಲನದಲ್ಲಿ ಬಹುಮಾನ ಪಡೆದುದು

೨೭) ೧೯೪೨—ಮಗ ಸುರೇಶನ ಜನನ.

೨೮) ೧೯೪೪—ಮಗಳು ಶಶಿಯ ಜನನ.

೨೯) ೧೯೪೮—೪ನೇ ಕನ್ನಡ ಸಣ್ಣ ಕಥೆಗಳ ಸಮ್ಮೇಳನಕ್ಕೆ ಸ್ವಾಗತಾಧ್ಯಕ್ಷ.

೩೦) ೧೯೫೦—ಗೌರೀಶ ವಾಚನ ಮಾಲೆಯ ಸಂಪಾದನೆ ಮತ್ತು ಹರಪನ ಹಳ್ಳಿಯ ಪ್ರಥಮ ಜನಪದ ಗೋಷ್ಠಿಯ ಅಧ್ಯಕ್ಷತೆ.

೩೧) ೧೯೫೧—ಮುಂಬಯಿ ಸರಕಾರದಿಂದ 'ಮಗಳ ಮದುವೆ' ಕಾದಂಬರಿಗೆ ೨೦೦೦ ರೂ. ಗಳ ಬಹುಮಾನ.

೩೨) ೧೯೫೬—ಮಗಳು ಶಶಿಯ ಮರಣ.

೩೨) ೧೯೫೭—ಕ್ಷಯರೋಗದಿಂದ ಹೆಂಡತಿ ರುಕ್ಮಿಣಿ-ಬಾಯಿಯವರ ಮರಣ; ಧಾರವಾಡದಲ್ಲಿ ಸೇರಿದ ಕಥೆ ಕಾದಂಬರಿ ಸಮ್ಮೇಳನದ ಸ್ವಾಗತಾಧ್ಯಕ್ಷ.

೩೩) ೧೯೫೮—ಮಗ ಸುರೇಶನ ಉಪನಯನ.

೩೪) ೧೯೫೯—ಮಗಳು ವೈಜಯಂತಿಯ ಮದುವೆಯ ಸಮಾರಂಭ.

೩೫) ೧೯೬೦—ಧಾರವಾಡದಲ್ಲಿ ಷಷ್ಠಿಪೂರ್ತಿ ಸಮಾರಂಭ

೩೬) ೧೯೬೧—ಜಯಂತಿಯಿಂದ ನಿವೃತ್ತಿ.

೩೭) ೧೯೬೩—ಪುರಂದರದಾಸರ ಮತ್ತು ಕನಕದಾಸರ ಸಾಹಿತ್ಯ ಸಂಪಾದನೆಯ ಪ್ರಾರಂಭ.

೩೮) ೧೯೬೪—ಮಗಳು ಸುಧಾಳ ಮದುವೆ

೩೯) ೧೯೬೭—ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನಪೀಠದಲ್ಲಿಯ ಬ್ರಾಹ್ಮಣ ಶಾಖೆಯಲ್ಲಿ ಪ್ರಧಾನ ಸಂಶೋಧಕರಾಗಿ ಸೇರಿದುದು.

೪೦) ೧೯೬೮—ಮಗ ಸುರೇಶನ ಮದುವೆ.

೪೧) ೧೯೭೧—ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಮತ್ತು ನಾಗಮಂಡಲದಲ್ಲಿ ಮೂರನೆಯ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಅಧ್ಯಕ್ಷರಾದದ್ದು,

೪೨) ೧೯೭೩—ಅಖಿಲ ಕರ್ನಾಟಕ ವೈದ್ಯಕೀಯ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರು ಕನ್ನಡ ಬಳಗ ಬೆಳಗಾಂವಿ.

೪೩) ೧೯೭೩—ಧರ್ಮಸ್ಥಳದಲ್ಲಿ ಸಾಹಿತ್ಯ ಸಮ್ಮೇಲನದ ಅಧ್ಯಕ್ಷ ಮತ್ತು ಸನ್ಮಾನ

೪೪) ೧೯೭೪—ಕರ್ನಾಟಕ ವಿಶ್ವವಿದ್ಯಾಲಯದಿಂದ ಡಾಕ್ಟರೇಟ ಪದವಿಯು ಸಿಕ್ಕದ್ದು.

೪೫) ೧೯೭೬—ಕನ್ನಡ ಜನಪದ ಸಾಹಿತ್ಯ ಎಂಬ ಪುಸ್ತಕ ಕರ್ನಾಟಕವಿಶ್ವವಿದ್ಯಾಲಯದ ಪ್ರಕಟಣೆ

೪೬) ೧೯೭೭—ಪಾರ್ಶ್ವವಾಯುವಿನಿಂದ ಹಾಸಿಗೆ ಹಿಡಿದದ್ದು.

೪೭) ೧೯೭೯—ಅನಾರೋಗ್ಯ

೪೮) ೧೯೮೦—ತಮ್ಮ ಗೋಪಾಲನ ಮರಣ, ಕನ್ನಡ ಸಾಹಿತ್ಯ ಪರಿಷತ್ತು ಅವರಿಂದ ಮನೆಯಲ್ಲಿಯೇ ಸತ್ಕಾರ

೪೯) ೧೯೮೧—'ಸಾಹಿತ್ಯ ವಿಹಾರ' ಪ್ರಕಟಣೆ.

೫೦) ೧೯೮೨—'ಬೆಳುವಲ' ಅಭಿನಂದನ ಗ್ರಂಥ ಸಮರ್ಪಣೆ ಮತ್ತು ಸತ್ಕಾರ.

೫೧) ೧೯೮೨—'ಕವಿಭೂಷಣ' ಸತ್ಕಾರ ಸಮಾರಂಭದ ಸಂಸ್ಮರಣ ಸಂಚಿಕೆ ಪ್ರಕಟನೆ.

# ಡಾ|| ಬೆಟಗೇರಿ ಕೃಷ್ಣಶರ್ಮರ ಸತ್ಕಾರ ಸಮಾರಂಭಕ್ಕೆ ಶುಭಾಶಯಗಳು

## ದಿ ಹಾರೂಗೇರಿ ದೊಡ್ಡ ಪ್ರಮಾಣದ ವಿವಿಧೋದ್ದೇಶಗಳ ಸಹಕಾರಿ ಸಂಘ ನಿಯಮಿತ, ಹಾರೂಗೇರಿ

ತಾಲೂಕ : ರಾಯಬಾಗ | ಜಿಲ್ಲಾ : ಬೆಳಗಾಂವ

| | | |
|---|---|---|
| ಮೆಂಬರರು | 1533 | ಆಡಳಿತ ಸಮಿತಿಯ ಸದಸ್ಯರು |
| ಶೇಅರ ಬಂಡವಲು | 6,88,125 | ಶ್ರೀ ಡಿ. ಸಿ. ಸದಲಗಿ ಚೇರಮನ |
| ಠೇವುಗಳು | 2,0,3,6,358 | ಶ್ರೀ ಆರ್. ಜಿ. ದೇಶಪಾಂಡೆ ವ್ಹಾ ಚೇರಮನ್ |
| ದುಡಿಯುವ ಬಂಡವಲ | 4013270 | ,, ಎಂ. ಬಿ. ಪಾಟೀಲ ಮೆಂಬರರು |
| ಗೊಬ್ಬರ ವಿತರಣೆ | 13.89,500 | ,, ಡಿ. ಪಿ. ಅಸ್ಕಿ ,, |
| 1981–82ರ ಲಾಭ | 1,48,212–63 | ,, ಯು. ಎಂ. ಜಮಾದಾರ ,, |
| ನಿಧಿಗಳು | 540465 | ,, ಎಸ್. ಸಿ. ಸಲಿಕರ ,, |
| ಗಂತಾಯಿಸಿದ್ದು | 11,36,400 | ,, ಎಸ್ ಎಸ್. ಠಕ್ಕಣ್ಣವರ ,, |
| ರೈತರಿಗೆ ಕೊಟ್ಟ ಸಾಲ, | 1778700 | ,, ಬಿ.ಪಿ. ಇಸಂಗಿ ,, |
| ಔಷಧ ಹಾಗು ಬೀಜಗಳ ಮಾರಾಟ | 28700 | ,, ಎಂ. ಟಿ. ಕೋರಿಗೇರಿ ,, |

ಇದಲ್ಲದೆ ನಿತ್ಯೋಪಯೋಗಿ ವಸ್ತುಗಳಾದ ಆಹಾರಧಾನ್ಯ, ಎಣ್ಣೆ, ಮಂತ್ರ, ಕಂಟ್ರೋಲ ವ. ಬಿನ್‌ಕಂಟ್ರೋಲ ಬಟ್ಟೆ ಮುಂತಾದವುಗಳ ವಿತರಕರು ರಾಯಬಾಗ ತಾಲೂಕ ನಿಯಂತ್ರಿತ ಆಹಾರಧಾನ್ಯ ಸಿಮೆಂಟ ಹಾಗೂ ಸೀಮ ಎಣ್ಣೆಯ ಠೋಕ ವಿತರಣೆಯ ಏಕಮೇವ ಸಹಕಾರಿ ಸಂಸ್ಥೆ

ಡಿ. ಸಿ. ಸದಲಗಿ
ಚೇರಮನ್

ಬಿ. ಆರ್. ಸಡೇದಾರ
ಸೆಕ್ರೆಟರಿ

---

ತಂತಿ : "ರೆಗ್ ಮಾರ್ಕ" | ಸಂಕೇಶ್ವರ ಮುಖ್ಯ ಕಚೇರಿ | ದೂರವಾಣಿ : 37
ಯ. ಮರ್ಡಿ ಉಪ ಆಫೀಸ | ದೂರವಾಣಿ : 29

## ಒಕ್ಕಲುತನ ಹುಟ್ಟುವಳಿ ಪೇಟೆಯ ಸಮಿತಿ, ಸಂಕೇಶ್ವರ

### "ರಾಣಿ ಚನ್ನಮ್ಮಾ ಮಾರ್ಕೆಟ ಯಾರ್ಡ"

ನಮ್ಮ ಹಾರ್ದಿಕ ಶುಭಾಶಯಗಳೊಂದಿಗೆ

ಕ್ರಮಪಡಿಸಿದ ಪೇಟೆಯಿಂದ ರೈತರಿಗಾಗುವ ಲಾಭಗಳು :

1. ಬಹಿರಂಗ ಲಿಲಾವಿನ ಮೂಲಕ ಕ್ರಮಪಡಿಸಿದ ಹುಟ್ಟುವಳಿಗಳ ವ್ಯಾಪಾರ. 2. ಮೇಲಾಟದ ಮೂಲಕ ದೊರೆಯುವ ಹೆಚ್ಚಿನ ಹಾಗೂ ನಿಶ್ಚಿತ ಧಾರಣೆಗಳು. 3. ಮುಷ್ಟಿ ಮಾಮೂಲುಗಳಿಲ್ಲದ ವ್ಯವಹಾರ. 4. ಅನವಶ್ಯಕ ಮಾರಾಟ ವೆಚ್ಚಗಳ ಅನಧಿಕೃತ ಕಡಿಗಳ ನಿರ್ಬಂಧನೆ. 5. ದೂರುಗಳ ತ್ವರಿತ ವಿಚಾರಣೆ. 6. ಪ್ರಾಮಾಣಿಕ ತೂಕ, ಅಳತೆಗಳ ಬಳಕೆ 7. ಮಾರ್ಕೆಟ ಕಮೀಟಿಯವರ ಸಿಬ್ಬಂದಿ ವರ್ಗದಿಂದ ಕಾಲ ಕಾಲಕ್ಕೆ ಮೇಲ್ವಿಚಾರಣೆ 8. ರೈತರಿಗೂ ಹಾಗೂ ವರ್ತಕರಿಗೂ ಮಾರ್ಕೆಟ ಯಾರ್ಡದಲ್ಲಿ ಅವಶ್ಯಕ ಸೇವಾ ಸೌಲಭ್ಯಗಳು.

ಮೇಲ್ಕಾಣಿಸಿದ ಎಲ್ಲ ಸೇವಾ ಸೌಲಭ್ಯಗಳು ನಮ್ಮ ಸಮಿತಿಯಿಂದ ದೊರೆಯುತ್ತಿದ್ದು, ಬಾಂಧವರು ಹಾಗೂ ವ್ಯಾಪಾರಸ್ಥರು ಹೆಚ್ಚು ಹೆಚ್ಚಾಗಿ ನಮ್ಮ ಮುಖ್ಯ ಮಾರ್ಕೆಟ ಯಾರ್ಡ ಹಾಗೂ ಉಪ ಮಾರ್ಕೆಟ ಯಾರ್ಡಗಳಿಗೆ ಬಂದು ವ್ಯವಹಾರ ಮಾಡಬೇಕಾಗಿ ವಿನಂತಿ.

ಎಲ್. ಜಿ. ಬೀರನೂರ
ಕಾರ್ಯದರ್ಶಿ.

ವಾಯ್. ಎಚ್. ಹಳ್ಳಿಕೇರಿ
ಚೇರಮನ್

ಜಬಿ:311081:4:

## ಡಾ|| ಬೆಟಗೇರಿ ಕೃಷ್ಣಶರ್ಮರ ಸತ್ಕಾರ ಸಮಾರಂಭಕ್ಕೆ ಶುಭಾಶಯಗಳು

## ದಿ ಗೋಕಾಕ ತಾಲೂಕ ಖಾದಿ ಗ್ರಾಮೋದ್ಯೋಗ ಸಹಕಾರಿ ಸಂಘ ನಿಯಮಿತ ಗೋಕಾಕ.

ಮ್ಯಾನೇಜರರು, ಕಾರ್ಯದರ್ಶಿಗಳು ಹಾಗೂ ಸಿಬ್ಬಂದಿಯವರು ಜಿಲ್ಲೆ : ಬೆಳಗಾವಿ. ಕರ್ನಾಟಕ ರಾಜ್ಯ

## ಗಿರೀಶ ಬುಕ್ ಡಿಪೋ ಗುರುವಾರ ಪೇಟೆ, ಚೆನ್ನಮ್ಮನ ಕಿತ್ತೂರು.

ತಾಲೂಕ : ಬೈಲಹೊಂಗಲ ಜಿಲ್ಲೆ : ಬೆಳಗಾವಿ. ಕರ್ನಾಟಕ ರಾಜ್ಯ

## ದಿ ತೆಳಗಿನಹಟ್ಟಿ ಗ್ರುಪ್ ಕುರಿಗಳ ಸಂಗೋಪನ ಮತ್ತು ಉಣ್ಣೆಯ ಉತ್ಪಾದಕ

ಸಹಕಾರಿ ಸಂಘ ನಿಯಮಿತ, ತೆಳಗಿನಹಟ್ಟಿ ತಾಲೂಕ : ಗೋಕಾಕ, ಜಿಲ್ಲಾ : ಬೆಳಗಾವಿ

## ಕಡಬಿ ವೂಲ್ ವೀವರ್ಸ ಸಹಕಾರಿ ಸಂಘ, ಕಡಬಿ

ತಾಲೂಕ : ಸವದತ್ತಿ ಜಿಲ್ಲೆ : ಬೆಳಗಾವಿ

## ದಿ ಗೋಕಾಕ ಅರ್ಬನ್ ಕೋ-ಆಪ. ಕ್ರೆಡಿಟ್ ಬ್ಯಾಂಕ ಲಿಮಿಟೆಡ್ ಗೋಕಾಕ.

(ಸ್ಥಾಪನಾ ೧೯೦೬) (ಫೋ. ನಂ. ೧೪) ಗೋಕಾಕ : ಜಿಲ್ಲೆ-ಬೆಳಗಾವಿ.

ಮ್ಯಾನೇಜರ ಶ್ರೀಮಾನ್ ಸಿ. ಬಿ. ತಾರಳಿ ಬಿ. ಎ. ಎಲ್ ಎಲ್. ಬಿ

## ದಿ ಹುಕ್ಕೇರಿ ತಾಲೂಕಾ ಕೋ-ಆಪ. ರೂರಲ್ ಇಲಿಕ್ಟ್ರಿಸಿಟಿ ಸೊಸಾಯಟಿ ಲಿ., ಹುಕ್ಕೇರಿ

ತಂತಿ : ''ರಲಕೂಪ'' ಜಿಲ್ಲಾ : ಬೆಳಗಾಂವ ಫೋನ : 30

ಭಾರತದಲ್ಲಿರುವ ಗ್ರಾಮೀಣ ವಿದ್ಯುತಸಹಕಾರಿ ಸಂಘಗಳಲ್ಲಿ ಮಾದರಿಯಾಗಿ ಕಾರ್ಯ ಮಾಡುತ್ತಿರುವ ವಿದ್ಯುತ ಸಹಕಾರಿ ಸಂಘ -: 31-3-98 ಕ್ಕೆ ಪ್ರಗತಿ ಚಿತ್ರ :-

1) ಮೆಂಬರರು 13817 2) ಶೇರ ಬಂಡವಾಳ ರೂ 24,56.475.00 3) ದಂಡಿಯಾದ ಬಂಡವಾಳ ರೂ 3 ಕೋಟಿ 52 ಲಕ್ಷಗಳು 4) ಒಕ್ಕಲುತನ ಪಂಪಸೆಟ್ಟು ಜೋಡಣಿಗಳು 4919 5) ಗ್ರಾಮ ವಿದ್ಯುತಕರಣ 131 ಹಳ್ಳಿಗಳು 6) ಮನೆಗಳು ಹಾಗೂ ವ್ಯಾಪಾರೋದ್ದಿಮೆಗಳಿಗೆ ವಿದ್ಯುತ ಜೋಡಣಿ 15927 7) ಚಿಕ್ಕ ಉದ್ದಿಮೆಗಳಿಗೆ ಜೋಡಣಿ 590 8) ವಿದ್ಯುತ ಲೈನುಗಳು 034 ಕಿ ಮಿ. 9) ಟ್ರಾನ್ಸಫಾರ್ಮರ ಕೇಂದ್ರಗಳು. 430

ಎಮ್. ಶಿವಪ್ಪಗೌಡ ಎಸ್. ಎ. ಸ್ ತುಬಚಿ ಎಚ್. ವಾಯ್. ಪಾಟೀಲ

ಮ್ಯಾನೇಜರ ವ್ಹಾ. ಚೇರಮನ್ ಚೇರಮನ್

## ದಿ ವಡೇರಹಟ್ಟಿ ಗ್ರಾಮ ಸೇವಾ ಸಹಕಾರಿ ಸಂಘ ನಿಯಮಿತ ವಡೇರಹಟ್ಟಿ

ಸ್ಥಾಪನಾ : 1949 ತಾಲೂಕ : ಗೋಕಾಕ ಜಿಲ್ಲಾ : ಬೆಳಗಾಂವ ರ. ನಂ 13070

ಮ್ಯಾ. ಕ. ಮೆಂಬರರ ಹೆಸರು.

1) ಶ್ರೀ ಲಕ್ಷ್ಮಣ ಸಿದ್ದಪ್ಪ ಜಗಮುತ್ತಿ ಚೇರಮನ್ 2) ಶ್ರೀ ಬಸಪ್ಪ ಲಗಮಪ್ಪ ಬೀರನಗಡ್ಡಿ ಮೆಂಬರ

ಮೆಂಬರರು :

3) ಶ್ರೀ ಸಿದ್ದಪ್ಪ ಕರೆಪ್ಪ ಜೋಕಾನಟ್ಟಿ 4) ಶ್ರೀ ಲಗಮಪ್ಪ ಲಕ್ಕಪ್ಪ ಪೂಜೇರ 5) ಶ್ರೀ ಭೀಮಪ್ಪ ರಾಮಪ್ಪ ಶಿರೇವ್ವಗೋಳ 6) ಶ್ರೀ ಲಕ್ಷ್ಮಣ ಕೆಂಪಣ್ಣಾ ನಂದಿ 7) ಶ್ರೀ ಈಶ್ವರ ತಾಯಿ ಕಾಳವ್ವ ಬಾಲನ್ನವರ 8) ಶ್ರೀ ಎಲ್. ಆರ್. ತೋಳಮರ್ಡಿ ಸೆಕ್ರೆಟರಿ 1) ಸಂಘದ ಮೆಂಬರ ಸಂಖ್ಯೆ 800 2) ಸಂಘದ ಶೇರ ಬಾಂಡವಲ 129120 3) ಆಡಿಟ ವರ್ಗಿಕರಣ "ಬ" 4) ಸಂಘದ ದಂಡಿಯಾದ ಬಾಂಡವಲ 600000 5) ಮೆಂಬರ ಜನರಿಗೆ ಸಾಲ ಹಂಚಿದ್ದು 444130

ದೀಪಾವಳಿ ಹಾಗೂ ನೂತನ ವರ್ಷ ನಮ್ಮ ಹಿತಚಿಂತಕರಿಗೂ ಗ್ರಾಹಕರಿಗೂ
ಸದಸ್ಯರಿಗೂ ಮತ್ತು ಠೇವುದಾರರಿಗೂ ಸುಖಸಮೃದ್ಧಿಯನ್ನೀಯಲಿ.

# ದಿ. ಬೆಳಗಾಂವ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ ನಿ., ಬೆಳಗಾಂವ

ರಾಷ್ಟ್ರೀಯ ಹೆದ್ದಾರಿ ನಂ. ೪, ಬೆಳಗಾಂವ

## ವಜ್ರ ಮಹೋತ್ಸವ ಆಚರಿಸಿದ ಬ್ಯಾಂಕು

ಪ್ರಧಾನ ಕಚೇರಿ : ಬೆಳಗಾಂವ    ಸ್ಥಾಪನೆ : 10-2-1919    ಶಾಖೆಗಳು 78

ತಂತಿ ವಿಳಾಸ : "ಡೀಸೆಂಟ ಬ್ಯಾಂಕ"
"DICENTBANK"

ದೂರವಾಣಿ : ಅಧ್ಯಕ್ಷರು : 22381
ಜನರಲ್ ಮ್ಯಾನೇಜರ : 20145
ಪಿ. ಬಿ. ಎಕ್ಸ : (4) : 23466, 23467
23476, 23451

- ಬ್ಯಾಂಕಿನ ಸೇವಿಂಗ್ಸ ಬ್ಯಾಂಕ ಮತ್ತು ಮುಂದ್ದತಿ ಠೇವುಗಳಲ್ಲಿ ನಿಮ್ಮ ಉಳಿತಾಯದ ಹಣ ತೊಡಗಿಸಿ ಹೆಚ್ಚಿನ ಬಡ್ಡಿಯನ್ನು ಪಡೆಯಿರಿ.
- ರಾಷ್ಟ್ರೀಕೃತ ಮತ್ತು ವಾಣಿಜ್ಯ ಬ್ಯಾಂಕುಗಳಿಗಿಂತ ಠೇವುಗಳ ಮೇಲೆ 1/2% ಅಧಿಕ ಬಡ್ಡಿಯನ್ನು ಕೊಡಲಾಗು
- ತ್ತಿದೆ. ಬ್ಯಾಂಕಿನಲ್ಲಿ ತೊಡಗಿಸಿದ ಠೇವುಗಳಿಗೆ ಡಿಪಾಜಿಟ್ ಇನ್ಸುರೆನ್ಸ ಕಾರ್ಪೋರೇಶನ್ನಿನ ಇನ್ಸೂರನ್ಸ ಸೌಲಭ್ಯವು ಅನ್ವಯವಾಗುತ್ತದೆ; ಮತ್ತು ನಿಮ್ಮ ಠೇವುಗಳಿಗೆ ಭದ್ರತೆ ಇದೆ.
- ಬ್ಯಾಂಕಿನ ಬಝಾರ ಶಾಖೆ, ಬೆಳಗಾಂವ, ಬೈಲಹೊಂಗಲ ಶಾಖೆ ಮತ್ತು ಸವದತ್ತಿ ಶಾಖೆಗಳಲ್ಲಿ ನಿಮ್ಮ ಮೌಲ್ಯವಸ್ತುಗಳ ಭದ್ರತೆಯು ಸಲುವಾಗಿ ಲಾಕರುಗಳ ವ್ಯವಸ್ಥೆ ಇರುತ್ತದೆ.
- ಬ್ಯಾಂಕಿನ 'ರಿಕರಿಂಗ' ಠೇವು ಯೋಜನೆ ಹಾಗೂ 'ಭಾಗ್ಯಜ್ಯೋತಿ' ಠೇವು ಯೋಜನೆಯಲ್ಲಿ ನಿಮ್ಮ ಉಳಿತಾಯದ ಹಣವನ್ನು ತೊಡಗಿಸಿ ಅಧಿಕ ಲಾಭ ಪಡೆಯಿರಿ. ರಿಕರಿಂಗ ಠೇವುಗಳನ್ನು ರೂ : ೧೦ ರ ಗುಣಕಗಳಲ್ಲಿಯೂ ಭಾಗ್ಯಜ್ಯೋತಿ ಠೇವುಗಳನ್ನು ರೂ ೧೦೦ ರ ಗುಣಕಗಳಲ್ಲಿಯೂ ತೊಡಗಿಸಬಹುದು.

### ರಿಕರಿಂಗ ಠೇವುಗಳು

| ತಿಂಗಳುಗಳು | ರೂ: 10 | ರೂ: 50 | ರೂ: 100 |
|---|---|---|---|
| 12 ತಿಂಗಳ ನಂತರ | 125-30 | 626-50 | 1253-00 |
| 36 ತಿಂಗಳ ನಂತರ | 424-10 | 2120-50 | 4241-00 |
| 72 ತಿಂಗಳ ನಂತರ | 1002-90 | 5014-50 | 10029-00 |
| 96 ತಿಂಗಳ ನಂತರ | 1501-80 | 7509-00 | 15018-00 |
| 120 ತಿಂಗಳ ನಂತರ | 2115-50 | 10577-50 | 21155-00 |

### ಭಾಗ್ಯಜ್ಯೋತಿ ಠೇವುಗಳು

| ತಿಂಗಳುಗಳು | ರೂ: 100 | ರೂ: 1000 | ರೂ: 10000 |
|---|---|---|---|
| 12 | 108-25 | 1082-00 | 10825-00 |
| 36 | 136-50 | 1365-00 | 13650-00 |
| 72 | 182-50 | 1825-00 | 18250-00 |
| 96 | 224-00 | 2240-00 | 22400-00 |
| 120 | 275-00 | 2750-00 | 27500-00 |

- ಜಿಲ್ಲೆಯಲ್ಲಿ ರೈತರಿಗೆ ಹಾಗೂ ಕುಶಲ ಕರ್ಮಿಗಳಿಗೆ ಮತ್ತು ನೇಕಾರರಿಗೆ ಆರ್ಥಿಕ ಸೌಲಭ್ಯವನ್ನು ಕಡಿಮೆ ಬಡ್ಡಿದರದಲ್ಲಿ ಕಲ್ಪಿಸಿಕೊಟ್ಟು ಅವರ ಆರ್ಥಿಕಾಭಿವೃದ್ಧಿಗೆ ನೆರವಾಗುತ್ತಿರುವ ಬ್ಯಾಂಕು.

ನಿಮ್ಮ ಎಲ್ಲ ಬ್ಯಾಂಕಿಂಗ ಸೌಲಭ್ಯಗಳಿಗೆ ಇಂದೇ ಸಮೀಪದ ಬ್ಯಾಂಕಿನ ಶಾಖೆಗೆ ಭೆಟ್ಟಿಕೊಟ್ಟು ವಿಚಾರಿಸಿರಿ. ಅಥವಾ ಸಂಪರ್ಕ ಬೆಳೆಸಿರಿ.

ದಿಗ್ದರ್ಶಕ ಮಂಡಳದ ಪರವಾಗಿ
ಶಂಕರರಾವ ನಲವಡೆ
ಪ್ರೆಸಿಡೆಂಟ

ಪಿ. ಸಿ. ಖಾನಾಪುರಿ
ಜನರಲ್ ಮ್ಯಾನೇಜರ

# ತಾಲೂಕ ಅಭಿವೃದ್ಧಿ ಮಂಡಳ, ಗೋಕಾಕ

( ಜಿಲ್ಲೆ ಬೆಳಗಾವಿ )

## ಡಾ. ಬೆಟಗೇರಿ ಕೃಷ್ಣಶರ್ಮ ಸತ್ಕಾರ ಸಮಾರಂಭಕ್ಕೆ

## —: ಸಂದೇಶ :—

ಡಾ. ಕೃಷ್ಣಶರ್ಮ ಇವರು ಗೋಕಾಕ ತಾಲೂಕಿನಲ್ಲಿ ಜನಿಸಿದವರು. ತಮ್ಮ ಪ್ರಾರಂಭ ಜೀವನದಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿರುತ್ತಾರೆ. ನಂತರ ಭಾರತ ಸ್ವತಂತ್ರ ಹೋರಾಟ ಚಳುವಳಿಯಲ್ಲಿ ಧುಮುಕಿ, ಸ್ವತಂತ್ರ ತರಲು ಹೋರಾಡಿದವರು ಗಾಂಧಿ ವಾದಿಗಳು. ವಿಚಾರಶೀಲರು, ಸೃಜನಾತ್ಮಕ ಕ್ರಿಯೆವುಳ್ಳವರು, ಪ್ರಖ್ಯಾತಿ ಸಾಹಿತಿಗಳು. ಇವರ ಸಾಹಿತ್ಯ ಪಾಂಡಿತ್ಯಕ್ಕೆ ಮೆಚ್ಚಿ ಕರ್ನಾಟಕ ವಿ. ನಿಲಯ ಧಾರವಾಡ ಇವರು ಗೌರವ ಡಾಕ್ಟರೇಟ ಪದವಿಯನ್ನಿತ್ತು ಸನ್ಮಾನಿಸಿರುತ್ತಾರೆ. ಕರ್ನಾಟಕ ಜನತೆಯು "ಕವಿಭೂಷಣ" ಎಂಬ ಬಿರುದನ್ನು ಕೊಟ್ಟು ಗೌರವಿಸಿರುತ್ತಾರೆ. ಇವರ ಅನೇಕ ಕೃತಿಗಳು ಜೀವನ ಪಥದಲ್ಲಿ ಹೊಂಬೆಳಕನ್ನು ಚೆಲ್ಲಿ ಅಂಧತ್ವವನ್ನು, ಮೌಢ್ಯತೆಯನ್ನು ಕಿತ್ತೊಗೆಯಲು ಮಾರ್ಗದರ್ಶಿಗಳಾಗಿ ನಿಂತಿವೆ. ಒಟ್ಟಿನಲ್ಲಿ ಹೇಳುವುದಾದರೆ ಸರ್ವ ವಿಧದಲ್ಲಿಯೂ ಡಾ. ಬೆಟಗೇರಿ ಕೃಷ್ಣಶರ್ಮ ಇವರು ಸಮಾಜದ ಅಭಿವೃದ್ಧಿಗೆ ತಮ್ಮ ಜೀವನವನ್ನೇ ಮುಡುಪಾಗಿಟ್ಟುಕೊಂಡು ಹೋರಾಟ ಮಾಡಿರುತ್ತಾರೆ. ಕಾರಣ ಅವರಿಗೆ 'ಬೆಳುವಲ' ಅಭಿನಂದನ ಗ್ರಂಥ ಅರ್ಪಿಸಿ, ಸತ್ಕಾರದ ನೆನಪಿಗೆ ಸಂಸ್ಮರಣ ಸಂಚಿಕೆ ಪ್ರಕಟಿಸುವ ಮೂಲಕ ಅವರ ೮೨ ನೆಯ ವಯಸ್ಸಿನಲ್ಲಿ ಭವ್ಯ ಸಮಾರಂಭ ಏರ್ಪಡಿಸುವುದು ಕರ್ನಾಟಕ ರಾಜ್ಯದ ಪ್ರತಿ ಜನತೆಯ ನೈತಿಕ ಕರ್ತವ್ಯವೂ ಆಗಿದೆ. ಅವರು ಇದೇ ತಾಲೂಕಿನವರಾದುದರಿಂದ ನಮಗೆ ಅತ್ಯಂತ ಹೆಮ್ಮೆ ಎನಿಸುತ್ತದೆ. ಅವರು ಶತಾಯುಸಿಗಳಾಗಲೆಂದು ಹಾರೈಸುತ್ತೇವೆ.

ಅಧ್ಯಕ್ಷರು
(ಬಿ. ಎಸ್. ಗೋರೋಶಿ)
ತಾಲೂಕಾ ಅಭಿವೃದ್ಧಿ ಮಂಡಳ,
ಗೋಕಾಕ.

(ಎಸ್. ಎಚ್. ವಿಜಯಕುಮಾರ್ ಕೆ. ಎ. ಎಸ)
ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು,
ತಾಲೂಕಾ ಅಭಿವೃದ್ಧಿ ಮಂಡಳ ಗೋಕಾಕ.

ಡಾ. ಬೆಟಗೇರಿ ಕೃಷ್ಣಶರ್ಮರ ಸತ್ಕಾರ ಸಮಾರಂಭಕ್ಕೆ ಶುಭಾಶಯಗಳು




## ಡಾ. ಬೆಟಗೇರಿ ಕೃಷ್ಣಶರ್ಮಾ ಅವರ ಸತ್ಕಾರ ಸಮಾರಂಭದ ಶುಭಾಶಯಗಳು



ಡಾ. ಬೆಟಗೇರಿ ಕೃಷ್ಣಶರ್ಮರ ಸತ್ಕಾರ ಸಮಾರಂಭಕ್ಕೆ

ಶುಭಾಶಯಗಳು

# ಬೆಟಗೇರಿ ವ್ಯವಸಾಯ ಸೇವಾ ಸಹಕಾರಿ ಸಂಘ

# ನಿಯಮಿತ, ಬೆಟಗೇರಿ

ತಾಲೂಕ ಗೋಕಾಕ ( ಜಿಲ್ಹಾ ಬೆಳಗಾಂವಿ )



**ನಮ್ಮ ಸಂಘವು ಒಕ್ಕಲಿಗರಿಗೆ ಉಪಯುಕ್ತ ಸೇವೆಯನ್ನು ಸಲ್ಲಿಸುತ್ತಲಿದೆ.**

ಸಂಘದಲ್ಲಿ ಬೆಳೆಗಳ ಸಂರಕ್ಷಣೆಗೆ ಬೇಕಾಗುವ ಔಷಧ ಮತ್ತು ಸ್ಪ್ರೇಯರ್‌ಗಳು, ವಿವಿಧ ರಾಸಾಯನಿಕ ಗೊಬ್ಬರಗಳು ಮುಂತಾದವುಗಳನ್ನು ಒಕ್ಕಲಿಗರಿಗೆ ಪೂರೈಸಲಾಗುತ್ತದೆ.

**ನಮ್ಮ ಸಂಘದ ಕಾರ್ಯಕಾರಿ ಮಂಡಳದ ಸದಸ್ಯರು**

೧) ಶ್ರೀ ಈರಯ್ಯ ವಿರೂಪಾಕ್ಷಯ್ಯ ಹೊಸಮಠ ಸದಸ್ಯರು
೨) ಶ್ರೀ ಸತ್ಯಪ್ಪ ನಿಂಗಪ್ಪ ಮಾಳೇದ ,,
೩) ಶ್ರೀ ಉದ್ದಪ್ಪ ಲಕ್ಕಪ್ಪ ಚಂದರಗಿ ,,
೪) ಶ್ರೀ ಬಸೆಟ್ಟಿ ಗಣಪ್ಪ ಭಜಂತ್ರಿ ,,
೫) ಶ್ರೀ ಭೀಮಪ್ಪ ಯಮನಪ್ಪ ಹೊರಟ್ಟಿ ,,
೬) ಶ್ರೀ ರಾಯಪ್ಪ ರಾಮಪ್ಪ ಕಂಬಾರ ,,
೭) ಶ್ರೀ ತಿಪ್ಪಣ್ಣ ಭೀಮಪ್ಪ ಚಂದರಗಿ ,,
೮) ಶ್ರೀ ಕಲ್ಲಪ್ಪ ರಾಮಪ್ಪ ದೇಯಣ್ಣವರ ,,

ಕಾರ್ಯದರ್ಶಿ
ಶ್ರೀ ದುಂಡಪ್ಪಣ್ಣ ಕಬ್ಬೂರ

ಚೇರಮನ್
ಶ್ರೀ ನಿ. ಶಿ. ನೀಲಣ್ಣವರ